# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೦, ೨೦೧೨ (ಭಾದ್ರಪದ ೨೯, ಶಕ ವರ್ಷ ೧೯೩೪) | ಸಂಚಿಕೆ ೩೮ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:–** **ಶ್ರೀಮತಿ ಗಂಗೂಬಾಯಿ ಆರ್. ಮಾನಕರ ಕೆ.ಎ.ಎಸ್.(ಹಿರಿಯ ಶ್ರೇಣಿ) ಅಧಿಕಾರಿ,** ಇವರ ವಿರುದ್ಧ ಇಲಾಖಾ ವಿಚಾರಣೆ – ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ

**ಓದಲಾಗಿದೆ:–** 1) ನೋಟೀಸ್ ಸಂಖ್ಯೆ:ಸಿಆಸುಇ 212 ಆಸೇವ 2011 ದಿನಾಂಕ 16.4.2012.

2) ಶ್ರೀಮತಿ ಗಂಗೂಬಾಯಿ ಆರ್. ಮಾನಕರ , ಕೆ.ಎ.ಎಸ್.(ಹಿರಿಯ ಶ್ರೇಣಿ) ಅಧಿಕಾರಿ, ಇವರ ದಿನಾಂಕ 30.4.2012 ರ ಉತ್ತರ.

**ಪ್ರಸ್ತಾವನೆ:**

ಉಪನಿರ್ದೇಶಕರು, ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬಿಜಾಪುರ, ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ **ಶ್ರೀಮತಿ ಗಂಗೂಬಾಯಿ ಆರ್. ಮಾನಕರ, ಕೆ.ಎ.ಎಸ್.(ಹಿರಿಯ ಶ್ರೇಣಿ) ಅಧಿಕಾರಿ,** ಪ್ರಸ್ತುತ ಯೋಜನಾ ನಿರ್ದೇಶಕರು, ಜಿಲ್ಲಾ ನಗರಾಭಿವೃದ್ಧಿ ಕೋಶ, ಬಿಜಾಪುರ, ಅವರನ್ನು ಅಧಿಸೂಚನೆ ಸಂಖ್ಯೆ:ಸಿಆಸುಇ 168 ಆಸೇವ 2011 ದಿನಾಂಕ 01.12.2011ರಂದು ಯೋಜನಾ ನಿರ್ದೇಶಕರು, DUDC, ಬಿಜಾಪುರ, ಹುದ್ದೆಗೆ ವರ್ಗಾಯಿಸಲಾಗಿದ್ದು, ವರ್ಗಾಯಿಸಿ ನೇಮಿಸಿದ ಸದರಿ ಹುದ್ದೆಯಲ್ಲಿ ನಿಗಧಿತ ಅವಧಿಯೊಳಗೆ ಕರ್ತವ್ಯಕ್ಕೆ ಹಾಜರಾಗದೇ ಇರುವುದು ಹಾಗೂ ಸರ್ಕಾರವು ನಿಯೋಜಿಸಿದ ಸದರಿ ಹುದ್ದೆಯಲ್ಲಿ ಹಾಜರಾಗಿ ವರದಿ ಸಲ್ಲಿಸುವಂತೆ ದಿನಾಂಕ 16.12.2011 ರಲ್ಲಿ ನೀಡಿರುವ ಆಡಳಿತ ನೋಟೀಸ್‌ಗೆ ಯಾವುದೇ ಪ್ರತಿಕ್ರಿಯೆ ನೀಡದೇ ಸರ್ಕಾರದ ನಿರ್ದೇಶನವನ್ನು ಉಲ್ಲಂಘಿಸಿರುವ ಆರೋಪಕ್ಕಾಗಿ ಅವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ 16.04.2012 ರ ನೋಟೀಸ್ ಅನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 12 ರನ್ವಯ ಜಾರಿ ಮಾಡುವುದರ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಸದರಿ ನೋಟೀಸಿಗೆ ಆರೋಪಿತ ಅಧಿಕಾರಿಯು ಮೇಲೆ (2) ರಲ್ಲಿ ಓದಲಾದ ದಿನಾಂಕ 30.04.2012 ರಂದು ಉತ್ತರ ಸಲ್ಲಿಸಿ, ತಾವು ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬಿಜಾಪುರದಲ್ಲಿ ಉಪನಿರ್ದೇಶಕರ ಹುದ್ದೆಯ ಜೊತೆಗೆ ಉಪವಿಭಾಗಾಧಿಕಾರಿ, ಇಂಡಿ, ಹಾಗೂ ವಿಶೇಷ ಭೂಸ್ವಾಧೀನಾಧಿಕಾರಿ, ಕೃಷ್ಣಾ ಮೇಲ್ದಂಡೆ ಯೋಜನೆ, ಇಂಡಿ, ಹುದ್ದೆಗಳ ಹೆಚ್ಚಿನ ಪ್ರಭಾರದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಜೊತೆಗೆ ಬಿಜಾಪುರ ಜಿಲ್ಲೆಯಲ್ಲಿ ಪಂಚತಂತ್ರ ಯೋಜನೆಯಡಿಯಲ್ಲಿ 3 ಲಕ್ಷಕ್ಕೂ ಅಧಿಕ ಸಂಖ್ಯೆಯ ಕಾರ್ಡುಗಳ ಮ್ಯಾಪಿಂಗ್ ಕಾರ್ಯ ಪ್ರಗತಿಯಲ್ಲಿ ಇದ್ದ ಪ್ರಯುಕ್ತ ಹಿಂದಿನ ಬಿಜಾಪರ ಜಿಲ್ಲೆಯ ಜಿಲ್ಲಾಧಿಕಾರಿಗಳು, ಸರ್ಕಾರವು ನೇಮಿಸಿದ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗಲು ತಮ್ಮನ್ನು ಬಿಡುಗಡೆ ಮಾಡಿರಲಿಲ್ಲವೆಂದು ತಿಳಿಸಿರುತ್ತಾರೆ. ಹಾಗೂ ಮೇಲಾಧಿಕಾರಿಗಳ ನಿರ್ದೇಶನ /ಆದೇಶದ ಮೇರೆಗೆ ಸದರಿ ಹುದ್ದೆ ಹಾಗೂ ಮೇಲ್ಕಂಡ ಎರಡು ಪ್ರಭಾರಿ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದುದ್ದರ ಮೇರೆಗೆ ವರ್ಗಾಯಿಸಿದ ಹುದ್ದೆಗೆ ಹಾಜರಾಗಲು ವಿಳಂಬವಾಗಿದೆ. ತಮ್ಮ ವೈಯಕ್ತಿಕ ಕಾರಣಗಳಿಂದ ಸರ್ಕಾರಿ ಆದೇಶವನ್ನು/ನಿರ್ದೇಶನವನ್ನು ಉಲ್ಲಂಘಿಸಿರುವುದರಿಂದ ಹಾಗೂ ಮೂರು ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದುದ್ದರಿಂದ ಕೆಲಸದ ಒತ್ತಡ ಹಾಗೂ ಕಾಲವಿಳಂಬದಿಂದ ನಿಗಧಿತ ಅವಧಿಯೊಳಗೆ ನೋಟೀಸಿಗೆ ಉತ್ತರ ಸಲ್ಲಿಸಲು

ಸಾಧ್ಯವಾಗಲಿಲ್ಲ ಹಾಗೂ ವರ್ಗಾಯಿಸಿದ ಹುದ್ದೆಗೆ ಹಾಜರಾಗಲು ಸಾಧ್ಯವಾಗಲಿಲ್ಲವೆಂದು ತಿಳಿಸಿ, ತಮ್ಮ ವಿರುದ್ಧ ಮಾಡಲಾದ ಆರೋಪಗಳಿಂದ ಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

**ಶ್ರೀಮತಿ ಗಂಗೂಬಾಯಿ ಅರ್ ಮಾನಕರ,** ಇವರು ಉಪನಿರ್ದೇಶಕರು, ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬಿಜಾಪುರ ಹುದ್ದೆಯ ಉಪ ವಿಭಾಗಾಧಿಕಾರಿ, ಇಂಡಿ, ಹಾಗೂ ವಿಶೇಷ ಭೂಸ್ವಾಧೀನಾಧಿಕಾರಿ, ಕೃಷ್ಣಾ ಮೇಲ್ದಂಡೆ ಯೋಜನೆ, ಇಂಡಿ, ಹುದ್ದೆಗಳಲ್ಲಿ ಕಾರ್ಯನಿರ್ವಹಿಸಿರುವುದು ಕಂಡು ಬರುತ್ತದೆ. ಜೊತೆಗೆ ಪಂಚತಂತ್ರ ಯೋಜನೆಯಡಿಯಲ್ಲಿ ಕಾರ್ಡುಗಳ ಮ್ಯಾಪಿಂಗ್ ಪ್ರಗತಿಯಲ್ಲಿದ್ದುದರಿಂದ ಇವರನ್ನು ಬಿಡುಗಡೆ ಮಾಡದೆ ಇರುವುದು ಕಂಡು ಬರುತ್ತದೆ. ಮೇಲಿನ ಹುದ್ದೆಗಳಲ್ಲಿನ ಕೆಲಸದ ಒತ್ತಡದ ಮೇರೆಗೆ ಹಾಗೂ ಕಾಲವಿಳಂಬದಿಂದ ನಿಗಧಿತ ಅವಧಿಯೊಳಗೆ ನೋಟೀಸಿಗೆ ಉತ್ತರ ಸಲ್ಲಿಸಲು ಸಾಧ್ಯವಾಗಲಿಲ್ಲವೆಂದು ತಮ್ಮ ಲಿಖಿತ ಹೇಳಿಕೆಯಲ್ಲಿ ವರದಿ ಮಾಡಿರುವುದು ಮೇಲ್ನೋಟಕ್ಕೆ ಸಮರ್ಥನೀಯವಾಗಿ ಕಂಡುಬರುತ್ತದೆ. ಹಾಗೂ ಇದಕ್ಕೆ ಪೂರಕವಾಗಿ ವರ್ಗಾಯಿಸಿದ ಹುದ್ದೆಗೆ ಹಾಜರಾಗುವ ಸಂಬಂಧ ಹಿಂದಿನ ಹುದ್ದೆಯಿಂದ ಬಿಡುಗಡೆ ಮಾಡದೇ ಇರಲು ಜಿಲ್ಲಾಧಿಕಾರಿಗಳು, ಬಿಜಾಪುರ, ಇವರು ನೀಡಿರುವ ಸಮರ್ಥನೀಯ ಕಾರಣಗಳನ್ನು ಹಾಗೂ ಹಿಂದಿನ ಪ್ರಭಾರಿ ಜಿಲ್ಲಾಧಿಕಾರಿಗಳು, ತಮ್ಮ ಪತ್ರಗಳಲ್ಲಿ ನೀಡಿರುವ ಸಮರ್ಥನೆಗಳನ್ನು ಹಾಗೂ ಆರೋಪಿತರು ತಮ್ಮ ಲಿಖಿತ ಉತ್ತರದಲ್ಲಿ ನೋಟೀಸ್‌ನಲ್ಲಿ ಮಾಡಲಾದ ಆರೋಪಗಳನ್ನು ಕೈಬಿಡಲು ಸಮರ್ಥಿಸಿ ಕೊಳ್ಳುವಂತಹ ಕಾರಣಗಳನ್ನು ನೀಡಿರುವುದನ್ನು ಪರಿಶೀಲಿಸಿ, ಇನ್ನು ಮುಂದೆ ಸರ್ಕಾರದಿಂದ ಜಾರಿಗೊಳಿಸುವ ಪತ್ರ ವ್ಯವಹಾರಗಳಿಗೆ ಕೂಡಲೇ ಸ್ಪಂದಿಸುವಂತೆ ಹಾಗೂ ಇಂತಹ ಸಂದರ್ಭ/ ಸನ್ನಿವೇಶಗಳಿಗೆ ಅವಕಾಶ ನೀಡದಂತೆ ಹಾಗೂ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ಅವರಿಗೆ ಎಚ್ಚರಿಕೆಯನ್ನು ನೀಡುವುದರ ಮೂಲಕ ಅವರ ವಿರುದ್ಧ ಮಾಡಲಾದ ಆರೋಪಗಳನ್ನು ಕೈಬಿಡಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 212 ಆಸೇವ 2012,ಬೆಂಗಳೂರು, ದಿನಾಂಕ 10.07.2012.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು **ಶ್ರೀಮತಿ ಗಂಗೂಬಾಯಿ ಆರ್. ಮಾನಕರ ಕೆ.ಎ.ಎಸ್.(ಹಿರಿಯ ಶ್ರೇಣಿ) ಅಧಿಕಾರಿ,** ಪ್ರಸ್ತುತ ಯೋಜನಾ ನಿರ್ದೇಶಕರು, ಜಿಲ್ಲಾ ನಗರಾಭಿವೃದ್ಧಿ ಕೋಶ, ಬಿಜಾಪುರ, ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 1957 ರ ನಿಯಮ 12 ರಡಿಯಲ್ಲಿ ಸಂಖ್ಯೆ:ಸಿಆಸುಇ 212 ಆಸೇವ 2012 ದಿನಾಂಕ 16.04.2012ರಂದು ನೋಟೀಸ್ ಜಾರಿ ಮಾಡುವ ಮೂಲಕ ಪ್ರಾರಂಬಿಸಲಾದ ಇಲಾಖಾ ವಿಚಾರಣೆಯನ್ನು ಕೈಬಿಡಲಾಗಿದೆ.

ಇನ್ನು ಮುಂದೆ ಸದರಿ ಅಧಿಕಾರಿಯವರು ಸರ್ಕಾರದಿಂದ ಜಾರಿಗೊಳಿಸುವ ನಿರ್ದೇಶನಗಳಿಗೆ ಕೂಡಲೇ ಸ್ಪಂದಿಸುವಂತೆ ಹಾಗೂ ಇಂತಹ ಅವಿಧೇಯತೆ ಹಾಗೂ ಆಶಿಸ್ತಿನ ಸಂದರ್ಭ/ಸನ್ನಿವೇಶಗಳಿಗೆ ಅವಕಾಶ ನೀಡದಂತೆ ಹಾಗೂ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದೆಂದು ಈ ಮೂಲಕ ಆಡಳಿತಾತ್ಮಕ ಎಚ್ಚರಿಕೆ ಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ಲಕ್ಷ್ಮಿನಾರಾಯಣ ರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು.ಇ.(ಸೇವೆಗಳು–3).

**ಪಿ.ಆರ್. 1867**

## ಆರ್ಥಿಕ ಸಚಿವಾಲಯ

**ಸಂಖ್ಯೆ: ಆಇ 7 ಸೇನಿಸೇ 2012 ಬೆಂಗಳೂರು, ದಿನಾಂಕ:04.08.2012.**

**ತಿದ್ದೋಲೆ**

ಸರ್ಕಾರಿ ಆದೇಶ ಸಂಖ್ಯೆ:ಆಇ 3 ಸೇನಿಸೇ 2012, ದಿ:14.06.2012ರ ಕಂಡಿಕೆ 17.1ರ ಮೊದಲನೇ ವಾಕ್ಯವನ್ನು ಈ ಕೆಳಕಂಡಂತೆ ಓದಿಕೊಳ್ಳತಕ್ಕದ್ದು:–

"ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 451ರಡಿಯಲ್ಲಿ ದಿನಾಂಕ:31.03.2012ರಂದು ಚಾಲ್ತಿಯಲ್ಲಿದ್ದಂತಹ ಅಂದರೆ ಈ ಆದೇಶ ಜಾರಿಗೆ ಬರುವ ಪೂರ್ವದಲ್ಲಿನ ವರ್ಗೀಕರಣದ ರೀತ್ಯ ಈ ಪರಿಷ್ಕೃತ ದರದ ಪ್ರಯಾಣ ಭತ್ಯೆಯು ಈ ಕೆಳಗಿನವರಿಗೆ ಲಭ್ಯವಾಗುತ್ತದೆ;–"

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಗೋಪಾಲಕೃಷ್ಣ**
ಸರ್ಕಾರದ ಜಂಟಿ ಕಾರ್ಯದರ್ಶಿ
ಆರ್ಥಿಕ ಇಲಾಖೆ(ಸೇವೆಗಳು).

## FINANCE SECRETARIAT

**No.FD 7 SRS 2012 Bangalore, Dated:04.08.2012.**

**CORRIGENDUM**

The first sentence of para 17.1 of the Government Order No. FD 3 SRS 2012, dated 14.06.2012 shall be read as follows:-

"These revised rates of travelling allowance shall be available to the following categories of officers as per the classification under Rule 451 of Karnataka Civil Service Rules prevailing as on 31.03.2012 i.e., prior to the date of effect of this order:- "

By order and in the name of the Governor of Karnataka

**K.S.GOPALAKRISHNA**
Joint Secretary to Government
Finance Department (Services).

**PR - 1882**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ;–** ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳು ಹಾಗೂ ಇತರೆ ನಿಗಮ/ಮಂಡಳಿಗಳ ವ್ಯಾಪ್ತಿಯಲ್ಲಿ ಶೌಚಾಲಯ ಗುಂಡಿಗಳನ್ನು ಯಾಂತ್ರಿಕೃತ ವಿಧಾನದ ಮೂಲಕ ಸ್ವಚ್ಚಗೊಳಿಸದೆ ಮ್ಯಾನ್ಯುಯಲ್ ಸ್ಕ್ಯಾವೆಂಜಿಂಗ್ ಮೂಲಕ ಸ್ವಚ್ಚಗೊಳಿಸುವ ಸಂದರ್ಭದಲ್ಲಿ ದುರ್ಘಟನೆಯಲ್ಲಿ ಮರಣ ಹೊಂದಿದ ಪೌರ ಕಾರ್ಮಿಕರ ಅವಲಂಬಿತರಿಗೆ ಪರಿಹಾರ ನೀಡುವ ಬಗ್ಗೆ.

**ಓದಲಾಗಿದೆ:**
1) ಆಯುಕ್ತರು, ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಪೌನಿ/ಘವನಿ/ಎಸ್ &ಜೆ/ಮೆಷಿನ್/ಸಿಆರ್/07/09–10, ದಿನಾಂಕ 17–05–2012.
2) ಸುತ್ತೋಲೆ ಸಂಖ್ಯೆ: ನಅಇ 10 ಎಂಡಬ್ಲ್ಯೂಪಿ 2012 (ಭಾಗ), ದಿನಾಂಕ: 04–06–2012.
3) ಸುತ್ತೋಲೆ ಸಂಖ್ಯೆ: ನಅಇ 267 ಎಂಎನ್‌ವೈ 2012, ದಿನಾಂಕ: 04–06–2012.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಪತ್ರದಲ್ಲಿ ಆಯುಕ್ತರು, ಪೌರಾಡಳಿತ ನಿರ್ದೇಶಕರು, ಮ್ಯಾನ್ಯುಯಲ್ ಸ್ಕ್ಯಾವೆಂಜಿಂಗ್ ನಿರ್ಮೂಲನಾ ಕುರಿತು ಇರುವ ರಿಟ್ ಅರ್ಜಿ ಸಂಖ್ಯೆ: 30221/2009 ಕ್ಕೆ ಸಂಬಂಧಿಸಿದಂತೆ ದಿನಾಂಕ: 17–04–2012 ರಂದು ನಡೆದ ವಿಚಾರಣೆ ವೇಳೆಯಲ್ಲಿ ಘನ ನ್ಯಾಯಾಲಯವು ನೀಡಿರುವ ತೀರ್ಪನ್ನು ಉಲ್ಲೇಖಿಸಿ ಅರ್ಜಿದಾರರ ಪರ ವಕೀಲರು ಮ್ಯಾನ್ಯುಯಲ್ ಸ್ಕ್ಯಾವೆಂಜಿಂಗ್‌ಯಿಂದ ಮೃತ ಪಟ್ಟವರ ಸಂಬಂಧಿಕರಿಗೆ ಕನಿಷ್ಠ ರೂ 5.00 ಲಕ್ಷಗಳ ಪರಿಹಾರ ನೀಡಬೇಕೆಂದು ಘನ ನ್ಯಾಯಾಲಯವನ್ನು ಕೋರುತ್ತಾ, ಸರ್ವೋಚ್ಚ ನ್ಯಾಯಾಲಯದ ಸಿವಿಲ್ ಅಪೀಲು ಸಂಖ್ಯೆ: 5322/2011 ಕ್ಕೆ ಸಂಬಂಧಿಸಿದಂತೆ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಒಳಚರಂಡಿ ಸ್ವಚ್ಚತ ಕೆಲಸಗಾರರು ದುರ್ಮರಣಕ್ಕೀಡಾದ ಸಂದರ್ಭಗಳಲ್ಲಿ ರೂ. 5.00 ಲಕ್ಷಗಳ ಪರಿಹಾರ ಧನವನ್ನು ನೀಡಬೇಕಾಗಿರುತ್ತದೆಂದು ದಿನಾಂಕ: 12–07–2011 ರಲ್ಲಿ ನೀಡಿರುವ ತೀರ್ಪನ್ನು ಘನ ನ್ಯಾಯಾಲಯದ ಗಮನಕ್ಕೆ ತರಲಾಗಿದೆ. ಈ ಹಿನ್ನೆಲೆಯಲ್ಲಿ ಮ್ಯಾನ್ಯುಯಲ್ ಸ್ಕಾವೆಂಜಿಂಗ್‌ನಿಂದ ಮೃತಮಟ್ಟವರ ಸಂಬಂಧಿಕರಿಗೆ ನೀಡಿರುವ ಪರಿಹಾರ ಮೊತ್ತವನ್ನು ರೂ. 1.50 ಲಕ್ಷಗಳಿಂದ ರೂ. 5.00 ಲಕ್ಷಗಳಿಗೆ ಹೆಚ್ಚಿಸುವ ಬಗ್ಗೆ ಸರ್ಕಾರದ ನಿಲುವನ್ನು ಕೋರಿರುತ್ತಾರೆ.

ತಲೆ ಮೇಲೆ ಮಲ ಹೊರುವ ಅನಿಷ್ಠ ಪದ್ಧತಿಯನ್ನು ಘನ ನ್ಯಾಯಾಲಯ ಮತ್ತು ಸರ್ಕಾರದ ಆದೇಶದ ಹಿನ್ನೆಲೆಯಲ್ಲಿ ಎಂಪ್ಲಾಯ್‌ಮೆಂಟ್ ಆಫ್ ಮ್ಯಾನ್ಯುಯಲ್ ಸ್ಕ್ಯಾವೆಂಜಿಂಗ್ ಅಂಡ್ ಕನ್‌ಸ್ಟ್ರಕ್ಷನ್ ಆಫ್ ಡ್ರೈ ಲೆಟ್ರಿನ್ (ಪ್ರಾಹಿಬಿಷನ್) ಆಕ್ಟ್ 1993ರ ರೀತ್ಯಾ ಮ್ಯಾನ್ಯುಯಲ್ ಸ್ಕ್ಯಾವೆಂಜಿಂಗ್ ಆಚರಣೆಗೆ ಕಾರಣರಾದವರು ಮತ್ತು ಸದರಿ ಪದ್ಧತಿಯನ್ನು ಮಾಡುತ್ತಿರುವವರು ಅಪರಾಧಿಗಳಾಗುತ್ತಾರೆ. ಸದರಿ ನಿಯಮದರನ್ವಯ ಒಣ ಶೌಚಾಲಯಗಳನ್ನು ಹೊಂದಿರುವುದಾಗಲಿ, ತಲೆ ಮೇಲೆ ಮಲ ಹೊರುವುದಾಗಲಿ ಹಾಗೂ ಮಲ ಹೊರುವ ಪದ್ಧತಿಗೆ ಪ್ರಚೋದನೆ ನೀಡುವುದನ್ನು ನಿಷೇದಿಸಿದೆ. ಇನ್ನು ಮುಂದೆ ಶೌಚಾಲಯದ ಗುಂಡಿಗಳನ್ನು ಯಾವುದೇ ವ್ಯಕ್ತಿಗಳು ಸ್ವಚ್ಛ ಮಾಡದೆ ಸಕ್ಕಿಂಗ್ ಯಂತ್ರದ ಮೂಲಕವೇ ಸ್ವಚ್ಛಗೊಳಿಸುವಂತೆ ತಿಳಿಸಲಾಗಿದೆ. ಮುಂದುವರೆದಂತೆ, ನಿರ್ಮಾಣ ಹಾಗೂ ನಿರ್ವಹಣೆಗಳಿಗೆ ಸಂಬಂಧಿಸಿದಂತೆ ನಗರ ಸ್ಥಳೀಯ ಸಂಸ್ಥೆಗಳಾದ ಪಟ್ಟಣ ಪಂಚಾಯತಿ, ಪುರಸಭೆ, ನಗರಸಭೆ ಮತ್ತು ಮಹಾನಗರಪಾಲಿಕೆಗಳ ವ್ಯಾಪ್ತಿಯಲ್ಲಿ ಇಂತಹ ದುರ್ಘಟನೆಗಳ ಮೂಲಕ ಅಚಾತುರ್ಯ ನಡೆದು ಕೆಲವು ವ್ಯಕ್ತಿಗಳು ದುರ್ಮರಣ ಹೊಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆ.

ಮೇಲೆ ಓದಲಾದ (2) ರ ಸುತ್ತೋಲೆಯಲ್ಲಿ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಇಂತಹ ದುರ್ಮರಣ ಹೊಂದಿದ ಪ್ರಸಂಗಗಳಲ್ಲಿ ನಗರ ಸ್ಥಳೀಯ ಸಂಸ್ಥೆಗಳಾದ ಪಟ್ಟಣ ಪಂಚಾಯತಿ, ಪುರಸಭೆ ನಗರಸಭೆ ಮತ್ತು ಮಹಾನಗರಪಾಲಿಕೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದ ನೌಕರರಾಗಿದ್ದ ಪಕ್ಷದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯನ್ವಯ ಸಹಜ ಸಾವನ್ನು ಹೊರತು ಪಡಿಸಿ ನಗರ ಸ್ಥಳೀಯ ಸಂಸ್ಥೆಗಳ ಮುನಿಸಿಪಲ್ ನಿಧಿ ಅಥವಾ ಎಸ್.ಎಫ್.ಸಿ. ಮುಕ್ತನಿಧಿಯಿಂದ ಭರಿಸಿ ಪ್ರತಿಯೊಂದು ಪ್ರಕರಣದಲ್ಲಿಯೂ ರೂ. 1.50 ಲಕ್ಷಗಳನ್ನು ಸಹ ಮೃತರ ಅವಲಂಭಿತರಿಗೆ ಸಂದಾಯ ಮಾಡತಕ್ಕದ್ದು. National Disaster Response Fund ಮಾರ್ಗಸೂಚಿಯನ್ವಯ ಈ ಹಣವನ್ನು ದುರ್ಘಟನೆ ನಡೆದ 24 ಘಂಟೆಗಳೊಳಗಾಗಿ ಮೃತರ ಕುಟುಂಬದ ಅವಲಂಬಿತರಿಗೆ ವಿತರಿಸತಕ್ಕದ್ದು.

ಆ) ದುರ್ಮರಣ ಹೊಂದಿದ ವ್ಯಕ್ತಿಯನ್ನು ಒಂದು ವೇಳೆ ಗುತ್ತಿಗೆದಾರನು ನೇಮಕ ಮಾಡಿಕೊಂಡ ಪ್ರಸಂಗದಲ್ಲಿ ಮೇಲೆ ಹೇಳಿದ ರೂ.1.50 ಲಕ್ಷಗಳ ಹಣವನ್ನು ಪಾವತಿಸುವುದಲ್ಲದೆ ಕಾರ್ಮಿಕ ಪರಿಹಾರ ಕಾಯ್ದೆಯಡಿ ಲೆಕ್ಕಾಚಾರ ಮಾಡಿ ಸಂಬಂಧಿತ ಗುತ್ತಿಗೆದಾರರು ದುರ್ಮರಣ ಹೊಂದಿದ ವ್ಯಕ್ತಿಯ ಅವಲಂಬಿತರಿಗೆ ಪರಿಹಾರವನ್ನು ಪಾವತಿಸತಕ್ಕದ್ದು. ಗುತ್ತಿಗೆದಾರರಿಂದ ಪಾವತಿಸಬೇಕಾದ ಪರಿಹಾರ ಮೊತ್ತದ ಜವಾಬ್ದಾರಿಯನ್ನು ಸಂಬಂಧಿತ ಅನುಷ್ಠಾನ ಏಜನ್ಸಿ ಹೊಂದಿರತಕ್ಕದ್ದು.

ಮುಂದುವರೆದು, ಘನ ಉಚ್ಚ ನ್ಯಾಯಾಲಯದಲ್ಲಿ ಮ್ಯಾನ್ಯುಯಲ್ ಸ್ಕ್ಯಾವೆಂಜಿಂಗ್ ಪದ್ಧತಿಯ ನಿರ್ಮೂಲನೆಗೆ ಸಂಬಂಧಿಸಿದಂತೆ, ಮ್ಯಾನ್ಯುಯಲ್ ಸ್ಕ್ಯಾವೆಂಜಿಂಗ್‌ನಿಂದ ಮೃತಪಟ್ಟವರ ಅವಲಂಬಿತರಿಗೆ ಪ್ರತಿಯೊಂದು ಪ್ರಕರಣದಲ್ಲಿಯೂ ರೂ. 5.00 ಲಕ್ಷಗಳನ್ನು (ರೂ ಐದು ಲಕ್ಷಗಳು ಮಾತ್ರ) ನೀಡಲು ಅಭಿಪ್ರಾಯಿಸಲಾಗಿದೆ.

ಮೇಲೆ ಓದಲಾದ (3) ರ ಸುತ್ತೋಲೆಯಲ್ಲಿ ಮಹಾನಗರ ಪಾಲಿಕೆಗಳು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಕರ್ನಾಟಕ ನಗರ ಮೂಲ ಸೌಯರ್ಕ ಅಭಿವೃದ್ಧಿ ಮತ್ತು ಹಣಕಾಸು ನಿಗಮ ನಿಯಮಿತ ಹಾಗೂ ಬೆಂಗಳೂರು ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ವ್ಯಾಪ್ತಿಯಲ್ಲಿ ಇಂತಹ ದುರ್ಘಟನೆಗಳ ಮೂಲಕ ಅಚಾತುರ್ಯದಿಂದ ದುರ್ಮರಣ ಹೊಂದಿದ ವ್ಯಕ್ತಿಗಳ ಪ್ರಕರಣಗಳಲ್ಲಿ ರೂ. 5.00 ಲಕ್ಷಗಳನ್ನು ಸಂಬಂಧಪಟ್ಟ ಮಹಾನಗರ ಪಾಲಿಕೆ / ನಿಗಮ / ಮಂಡಳಿಗಳ ಸ್ವಂತ ನಿಧಿಯಿಂದ ಭರಿಸಿ ಪಾವತಿಸಲು ಸೂಚಿಸಲಾಗಿದೆ.

ಪ್ರಸ್ತಾವನೆ ಹಾಗೂ ಈಗಾಗಲೇ ಹೊರಡಿಸಲಾದ ಸುತ್ತೋಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 10 ಎಂಡಬ್ಲ್ಯೂಪಿ 2012, ಬೆಂಗಳೂರು, ದಿನಾಂಕ: 19–06–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದಲ್ಲಿ ಮ್ಯಾನ್ಯುಯಲ್ ಸ್ಕ್ಯಾವೆಂಜಿಂಗ್‌ನಿಂದ ಮೃತಪಟ್ಟವರ ಅವಲಂಬಿತರಿಗೆ ಪ್ರತಿಯೊಂದು ಪ್ರಕರಣದಲ್ಲಿಯೂ ರೂ. 1.50 ಲಕ್ಷಗಳ ಬದಲಾಗಿ ರೂ. 5.00 ಲಕ್ಷಗಳನ್ನು (ರೂ ಐದು ಲಕ್ಷಗಳು ಮಾತ್ರ) ಪರಿಹಾರ ಮೊತ್ತವನ್ನು ನಗರ ಸ್ಥಳೀಯ ಸಂಸ್ಥೆಗಳ ಮುನಿಸಿಪಲ್ ನಿಧಿ ಅಥವಾ ಎಸ್.ಎಫ್.ಸಿ. ಮುಕ್ತನಿಧಿಯಿಂದ ಭರಿಸುವುದು ಹಾಗೂ ಉಳಿದಂತೆ ಮಹಾನಗರ ಪಾಲಿಕೆ / ನಿಗಮ/ ಮಂಡಳಿಗಳು ತಮ್ಮ ಸ್ವಂತ ನಿಧಿಯಿಂದ ಭರಿಸಿ ಪಾವತಿಸಲು ಸರ್ಕಾರದ ಅನುಮೋದನೆಯನ್ನು ನೀಡಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ರಮೇಶ್ ಬಾಬು**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 1870**

## ಆರ್ಥಿಕ ಸಚಿವಾಲಯ

**ವಿಷಯ:–** ಕರ್ನಾಟಕ ನಾಗರೀಕ ಸೇವಾ ನಿಯಮಗಳು – ಪ್ರಯಾಣ ಭತ್ಯೆಯ ದರಗಳ ಪರಿಷ್ಕರಣೆ ಮತ್ತು ಅರ್ಹತೆಗಳ ಮಾರ್ಪಾಡಿನ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 3 ಸೇನಿಸೇ 2012, ಬೆಂಗಳೂರು, ದಿನಾಂಕ :14.06.2012.**

2011 ರ ಅಧಿಕಾರಿ ವೇತನ ಸಮಿತಿಯು ಪ್ರಯಾಣ ಭತ್ಯೆಯ ದರಗಳ ಪರಿಷ್ಕರಣೆ ಮತ್ತು ಅರ್ಹತೆಗಳ ಮಾರ್ಪಾಡಿನ ಬಗ್ಗೆ ಮಾಡಿರುವ ಶಿಫಾರಸ್ಸುಗಳನ್ನು ಪರಿಗಣಿಸಿ ಸರ್ಕಾರವು ಅಂಗೀಕರಿಸಿದೆ ಮತ್ತು ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**2. ಪ್ರಯಾಣ ಭತ್ಯೆಯ ಉದ್ದೇಶಗಳಿಗಾಗಿ ಸರ್ಕಾರಿ ನೌಕರರ ವರ್ಗೀಕರಣ:**

**2.1** ಪ್ರಯಾಣ ಭತ್ಯೆಯ ಉದ್ದೇಶಗಳಿಗಾಗಿ ಸರ್ಕಾರಿ ನೌಕರರ ಪ್ರಸಕ್ತ ವರ್ಗೀಕರಣವನ್ನು ಈ ಕೆಳಕಂಡಂತೆ ಪರಿಷ್ಕರಿಸತಕ್ಕದ್ದು.

**ಕೋಷ್ಟಕ**

| ಪ್ರವರ್ಗ | ಮೂಲ ವೇತನ (ತಿಂಗಳಿಗೆ) |
|---|---|
| (1) | (2) |
| I ಎ | ರೂ. 40,050/– ಮತ್ತು ಅದಕ್ಕೂ ಮೇಲ್ಪಟ್ಟು |
| I ಬಿ | ರೂ. 34,500/– ರಿಂದ ರೂ. 40,049/– ವರೆಗೆ |
| II | ರೂ. 22,200/– ರಿಂದ 34,499/– ವರೆಗೆ |
| III | ರೂ. 16,000/– ರಿಂದ ರೂ. 22,199/– ವರೆಗೆ |
| IV | ರೂ. 16,000/– ಗಳಿಗಿಂತ ಕಡಿಮೆ |

**2.2** ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಯ 451ನೇ ನಿಯಮದ ಉಪಬಂಧಗಳು ಈ ಮೇಲಿನಂತೆ ಮಾರ್ಪಾಡಾಗತಕ್ಕದ್ದು.

**3. ರೈಲಿನಲ್ಲಿ ಪ್ರಯಾಣ ಮಾಡಲು ಅರ್ಹತೆ:**

ಪ್ರವಾಸ ಅಥವಾ ವರ್ಗಾವಣೆ ಮೇಲಿನ ಪ್ರಯಾಣಗಳಿಗಾಗಿ ಸರ್ಕಾರಿ ನೌಕರರ ರೈಲ್ವೆ ಪ್ರಯಾಣ ಸೌಕರ್ಯದ ಹಕ್ಕನ್ನು ಈ ಮುಂದಿನಂತೆ ಕ್ರಮಬದ್ಧಗೊಳಿಸತಕ್ಕದ್ದು.

| ಕ್ರಮ ಸಂಖ್ಯೆ | ಸರ್ಕಾರಿ ನೌಕರನು ಯಾವ ವರ್ಗಕ್ಕೆ ಸೇರಿರುವನೋ ಆ ವರ್ಗ | ಅರ್ಹತೆ |
|---|---|---|
| 1. | **I(ಎ) 40,050** ರೂಪಾಯಿ ಅಥವಾ ಅದಕ್ಕೂ ಮೇಲ್ಪಟ್ಟು ವೇತನ ಪಡೆಯುವವರು<br>**I(ಬಿ) 34,500/–** ರೂಪಾಯಿ ಅಥವಾ ಅದಕ್ಕೂ ಮೇಲ್ಪಟ್ಟು ಅಂದರೆ **40,050** ರೂಪಾಯಿಗಳಿಗಿಂತ ಕಡಿಮೆ ವೇತನ ಪಡೆಯುವವರು | ಶತಾಬ್ಧಿ ಎಕ್ಸ್ ಪ್ರೆಸ್‌ನಲ್ಲಿ ಎಕ್ಸಿಕ್ಯೂಟಿವ್ ಕ್ಲಾಸ್ ಮತ್ತು ಇತರೆ ರೈಲುಗಳಲ್ಲಿ ಎ.ಸಿ.ಫಸ್ಟ್ ಕ್ಲಾಸ್.<br>ಶತಾಬ್ಧಿ ಎಕ್ಸ್‌ಪ್ರೆಸ್‌ನಲ್ಲಿ ಎ.ಸಿ.ಚೇರ್ ಕಾರ್ ಮತ್ತು ಇತರೆ ರೈಲುಗಳಲ್ಲಿ ಎ.ಸಿ. 2 ಟಯರ್. |
| 2. | II | ಎ.ಸಿಚೇರ್ ಕಾರ್/ಫಸ್ಟ್ ಕ್ಲಾಸ್/ ಎ.ಸಿ. 3ಟಯರ್. |
| 3. | III | ಎ.ಸಿ.ಚೇರ್ ಕಾರ್/ಫಸ್ಟ್ ಕ್ಲಾಸ್/ ಎ.ಸಿ. 3 ಟಯರ್. |
| 4. | IV | ಶತಾಬ್ಧಿ ಹಾಗೂ ರಾಜಧಾನಿ ಎಕ್ಸ್ ಪ್ರೆಸ್‌ನಲ್ಲಿ ಎ.ಸಿ. ಚೇರ್ ಕಾರ್ ಮತ್ತು ಇತರೆ ರೈಲುಗಳಲ್ಲಿ ಸ್ಲೀಪರ್ ಕ್ಲಾಸ್. |

**3.2** ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ 451ನೇ ನಿಯಮದ ಉಪಬಂಧಗಳು ಈ ಮೇಲೆ ತಿಳಿಸಿರುವಷ್ಟರ ಮಟ್ಟಿಗೆ ಮಾರ್ಪಾಡಾಗತಕ್ಕದ್ದು.

**4. ದಿನ ಭತ್ಯೆ.**

**4.1** ರಾಜ್ಯದ ಒಳಗೆ ಮತ್ತು ರಾಜ್ಯದ ಹೊರಗೆ ಮಾಡುವ ಪ್ರಯಾಣಗಳ ಸಂದರ್ಭದಲ್ಲಿನ ತಂಗುವಿಕೆಗಳಿಗೆ ಸಂಬಂಧಿಸಿದ ದಿನಭತ್ಯೆಯ ಪರಿಷ್ಕೃತ ದರಗಳು ಮತ್ತು ಪರಿಷ್ಕೃತ ವರ್ಗೀಕರಣವು ಈ ಕೆಳಗಿನಂತಿರತಕ್ಕದ್ದು;

| ಸರ್ಕಾರಿ ನೌಕರನು ಯಾವ ವರ್ಗಕ್ಕೆ ಸೇರಿರುವನೋ ಆ ವರ್ಗ | ರಾಜ್ಯದಲ್ಲಿ ತಂಗುವಿಕೆಗಳು | | | ರಾಜ್ಯದ ಹೊರಗಡೆ ತಂಗುವಿಕೆಗಳು | |
|---|---|---|---|---|---|
| | ಬೆಂಗಳೂರು | ಮಹಾನಗರ ಪಾಲಿಕೆಗಳಿರುವ ನಗರಗಳು | ಇತರ ಸ್ಥಳಗಳು | ಅಹಮದಾಬಾದ್, ಮುಂಬಯಿ, ಕಲ್ಕತ್ತಾ, ದೆಹಲಿ, ಗಜಿಯಾಬಾದ್, ಹೈದರಾಬಾದ್, ಚೆನ್ನೈ ಕಾನಪುರ, ಮುಸ್ಸೋರಿ, ಪುಣೆ, ಸಿಮ್ಲಾ, ನಾಗಪುರ,ಶ್ರೀನಗರ, ಗೋವಾ, ಡಿಯು, ಮತ್ತು ಡಾಮನ್ | ಇತರೆ ಸ್ಥಳಗಳು |
| Iಎ & Iಬಿ | ರೂ. 340 | ರೂ.285 | ರೂ.225 | ರೂ.405 | ರೂ.340 |
| II | ರೂ. 250 | ರೂ.195 | ರೂ.165 | ರೂ.340 | ರೂ.250 |
| III | ರೂ. 195 | ರೂ.165 | ರೂ.135 | ರೂ. 285 | ರೂ. 165 |
| IV | ರೂ. 135 | ರೂ.130 | ರೂ.115 | ರೂ. 195 | ರೂ. 135 |

**4.2.** ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 451 ಉಪಬಂಧಗಳು ಈ ಮೇಲೆ ತಿಳಿಸಿರುವಷ್ಟರ ಮಟ್ಟಿಗೆ ಮಾರ್ಪಾಡಾಗತಕ್ಕದ್ದು,

**5. ದಿನಭತ್ಯೆಗಳ ವಿಶೇಷ ದರಗಳು:_**

**5.1** ರಾಜ್ಯದ ಹೊರಗೆ ಕೈಗೊಂಡ ಪ್ರವಾಸದ ಪ್ರಯಾಣಗಳ ಸಂದರ್ಭಗಳಲ್ಲಿ ಅಧಿಸೂಚಿತ ದರಗಳಲ್ಲಿ ಶುಲ್ಕಗಳನ್ನು ವಿಧಿಸುವಂತಹ ಊಟ ಮತ್ತು/ಅಥವಾ ವಸತಿ ಸೌಕರ್ಯಗಳನ್ನು ಒದಗಿಸುವಂತಹ ಹೋಟೆಲ್‌ಗಳು ಅಥವಾ ಇತರ ನೋಂದಾಯಿತ ಸಂಸ್ಥೆ ಗಳಲ್ಲಿ ಉಳಿದುಕೊಳ್ಳುವ ಬಗ್ಗೆ ನೀಡುವ ದಿನ ಭತ್ಯೆಯ ವಿಶೇಷ ದರಗಳನ್ನು ಈ ಕೆಳಕಂಡಂತೆ ಪರಿಷ್ಕರಿಸತಕ್ಕದ್ದು;

| ಸರ್ಕಾರಿ ನೌಕರನು ಯಾವ ವರ್ಗಕ್ಕೆ ಸೇರಿರುವನೋ ಆ ವರ್ಗ | ಅಹಮದಾಬಾದ್, ಮುಂಬಯಿ, ಕಲ್ಕತ್ತಾ, ದೆಹಲಿ, ಗಜಿಯಾಬಾದ್, ಹೈದರಾಬಾದ್, ಚೆನ್ನೈ, ಕಾನಪುರ, ಮುಸ್ಸೋರಿ, ಪುಣೆ, ಸಿಮ್ಲಾ, ನಾಗಪುರ, ಶ್ರೀನಗರ ಮತ್ತು ಗೋವಾ, ಡಿಯು ಮತ್ತು ಡಾಮನ್ | ರಾಜ್ಯದ ಹೊರಗಿನ ಇತರ ಸ್ಥಳಗಳು |
|---|---|---|
| I ಎ & 1ಬಿ | ರೂ. 750 | ರೂ. 600 |
| II | ರೂ. 600 | ರೂ. 450 |
| III | ರೂ. 450 | ರೂ. 375 |
| IV | ರೂ. 330 | ರೂ. 300 |

**5.2** ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 451(3) ನೇ ನಿಯಮಗಳ ಉಪಬಂಧಗಳು ಈ ಮೇಲೆ ತಿಳಿಸಿರುವಷ್ಟರ ಮಟ್ಟಿಗೆ ಮಾರ್ಪಾಡಾಗತಕ್ಕದ್ದು,

**6. ರಸ್ತೆ ಮೈಲೇಜು ದರ:**

ವಿವಿಧ ಪ್ರವರ್ಗಕ್ಕೆ ಸೇರಿದ ಸರ್ಕಾರಿ ನೌಕರರು ಈ ಕೆಳಕಂಡ ಕೋಷ್ಟಕದಲ್ಲಿ ನಮೂದಿಸಿರುವಂತೆ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ಮತ್ತು ಇತರೆ ರಾಜ್ಯ ಸ್ವಾಮ್ಯದ ಸಾರಿಗೆ ನಿಗಮದ ಬಸ್ಸುಗಳಿಗೆ ನಿಗದಿಪಡಿಸಿದ ದರಗಳನ್ನು ಪಡೆಯಲು ಅರ್ಹರಿರುತ್ತಾರೆ.

| ಕ್ರಮ ಸಂಖ್ಯೆ | ಸರ್ಕಾರಿ ನೌಕರನು ಯಾವ ವರ್ಗಕ್ಕೆ ಸೇರಿರುವನೋ ಆ ವರ್ಗ | ಹಕ್ಕು |
|---|---|---|
| 1 | Iಎ & Iಬಿ | ವೋಲ್ವೋ (ಐರಾವತ) – ಹವಾನಿಯಂತ್ರಿತ ಸೀಟರ್, ಕರೋನ (ಅಂಬಾರಿ) – ಹವಾನಿಯಂತ್ರಿತವಲ್ಲದ ಸೀಟರ್, ಹವಾನಿಯಂತ್ರಿತ ಸ್ಲೀಪರ್ ಮತ್ತು ಹವಾನಿಯಂತ್ರಿತವಲ್ಲದ ಸ್ಲೀಪರ್, ಅಲ್ಟ್ರಾ ಡಿಲಕ್ಸ್(ರಾಜಹಂಸ) – ಹವಾನಿಯಂತ್ರಿತವಲ್ಲದ ಸೀಟರ್ |
| 2. | II | ಶೀತಲ್–ಹವಾನಿಯಂತ್ರಿತ ಸೀಟರ್<br>ಅಲ್ಟ್ರಾ ಡಿಲಕ್ಸ್(ರಾಜಹಂಸ) – ಹವಾನಿಯಂತ್ರಿತವಲ್ಲದ ಸೀಟರ್. |
| 3. | III & IV | ಸಾಮಾನ್ಯ / ಎಕ್ಸ್‌ಪ್ರೆಸ್ – ಹವಾನಿಯಂತ್ರಿತವಲ್ಲದ ಸೀಟರ್ |

**6.1** ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 485ನೇ ನಿಯಮದ ಉಪಬಂಧಗಳು ಈ ಮೇಲೆ ತಿಳಿಸಿರುವಷ್ಟರ ಮಟ್ಟಿಗೆ ಮಾರ್ಪಾಡಾಗತಕ್ಕದ್ದು.

**7. ಪ್ರವಾಸ ಕಾಲದಲ್ಲಿ ವಿಮಾನದ ಮೂಲಕ ಪ್ರಯಾಣ:**

**7.1** ರೂ.40,050 ಅಥವಾ ಅದಕ್ಕೂ ಮೇಲ್ಪಟ್ಟು ವೇತನ ಪಡೆಯುವ ಸರ್ಕಾರಿ ನೌಕರನು ರಾಜ್ಯದ ಹೊರಗಿನ ಪ್ರವಾಸದ ಸಂಬಂಧದಲ್ಲಿ ಮಾಡುವ ಪ್ರಯಾಣವನ್ನು ವಿಮಾನದ ಮೂಲಕ ಕೈಗೊಳ್ಳಲು ಹಕ್ಕುಳ್ಳವನಾಗಿರತಕ್ಕದ್ದು.

**7.2** ರೂ.34,500 ಅಥವಾ ಅದಕ್ಕೂ ಮೇಲ್ಪಟ್ಟು ವೇತನವನ್ನು ಪಡೆಯುವ ಸರ್ಕಾರಿ ನೌಕರನು ರಾಜ್ಯದೊಳಗೆ ಪ್ರವಾಸದ ಸಂಬಂಧದಲ್ಲಿ ಮಾಡುವ ಪ್ರಯಾಣವನ್ನು ವಿಮಾನದ ಮೂಲಕ ಕೈಗೊಳ್ಳಲು ಹಕ್ಕುಳ್ಳವನಾಗಿರತಕ್ಕದ್ದು.

**7.3** ರೂ.34,500 ಅಥವಾ ಅದಕ್ಕೂ ಮೇಲ್ಪಟ್ಟು ವೇತನವನ್ನು ಪಡೆಯುವ ಸರ್ಕಾರಿ ನೌಕರನು ಕರ್ತವ್ಯದ ಮೇಲೆ ಬೆಂಗಳೂರಿನಿಂದ ಬೀದರ್ ಜಿಲ್ಲೆಯ ಯಾವುದೇ ಸ್ಥಳಕ್ಕೆ/ಬೆಂಗಳೂರಿನಿಂದ ಗುಲ್ಬರ್ಗಕ್ಕೆ ಮತ್ತೆ ಅದೇ ರೀತಿಯಾಗಿ ಹಿಂದಕ್ಕೆ ಪ್ರವಾಸವನ್ನು ಕೈಗೊಳ್ಳಲು ಹೈದರಾಬಾದಿನ ಮೂಲಕ ವಿಮಾನದಲ್ಲಿ ಪ್ರಯಾಣವನ್ನು ಕೈಗೊಳ್ಳಲು ಅವನಿಗೆ ಅಧಿಕಾರ ನೀಡಲಾಗಿದೆ.

**7.4** ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಯ 487ನೇ ನಿಯಮದ (1)ನೇ ಉಪನಿಯಮದ (ಎ) ಖಂಡದ ಉಪಬಂಧಗಳು, ಅದೇ ನಿಯಮಗಳ 462ನೇ ನಿಯಮದ ಅಡಿಯಲ್ಲಿರುವ ಟಿಪ್ಪಣಿ–10, ಈ ಮೇಲೆ ತಿಳಿಸಿರುವಷ್ಟರ ಮಟ್ಟಿಗೆ ಮಾರ್ಪಾಡಾಗತಕ್ಕದ್ದು.

**8. ವರ್ಗಾವಣೆಯಾದಾಗ ವಿಮಾನ ಮೂಲಕ ಪ್ರಯಾಣ:**

**8.1** ಪರಿಷ್ಕೃತ ವೇತನ ಶ್ರೇಣಿಯಲ್ಲಿ ರೂ.40,050/– ಅಥವಾ ಅದಕ್ಕಿಂತ ಹೆಚ್ಚು ವೇತನ ಪಡೆಯುವ ಸರ್ಕಾರಿ ನೌಕರನು ವರ್ಗಾವಣೆಯಾದಾಗ ವಿಮಾನ ಮೂಲಕ ಪ್ರಯಾಣಕ್ಕೆ ಹಕ್ಕುಳ್ಳವನಾಗುತ್ತಾನೆ ಮತ್ತು ಅವನು ತನಗಾಗಿ ಒಂದು ಪ್ರಯಾಣ ದರ (fare) ಹಾಗೂ ತನ್ನ ಕುಟುಂಬದ ಪ್ರತಿಯೊಬ್ಬ ಸದಸ್ಯನಿಗಾಗಿ ಒಂದು ಹೆಚ್ಚುವರಿ ಪ್ರಯಾಣ ದರವನ್ನು ಕ್ಲೇಮ್ ಮಾಡಲು ಹಕ್ಕುಳ್ಳವನಾಗುತ್ತಾನೆ.

**8.2** ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 532ನೇ ನಿಯಮದ ಉಪಬಂಧಗಳು ಈ ಮೇಲೆ ತಿಳಿಸಿರುವಷ್ಟರ ಮಟ್ಟಿಗೆ ಮಾರ್ಪಾಡಾಗತಕ್ಕದ್ದು.

**9. ವರ್ಗಾವಣೆ ಅನುದಾನ:**

**9.1** ಕೇಂದ್ರ ಸ್ಥಾನದ ಬದಲಾವಣೆಯಾಗುವುದು ಸೇರಿದಂತೆ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾವಣೆಯಾಗಿರುವ ಸರ್ಕಾರಿ ನೌಕರನಿಗೆ ಅನುಮತಿಸಲ್ಪಡುವ ವರ್ಗ ಮತ್ತು ವರ್ಗಾವಣಾ ಅನುದಾನದ ದರಗಳನ್ನು ಈ ಕೆಳಗಿನಂತೆ ಪರಿಷ್ಕರಿಸತಕ್ಕದ್ದು.

| ಸರ್ಕಾರಿ ನೌಕರನು ಯಾವ ವರ್ಗಕ್ಕೆ ಸೇರಿರುವನೋ ಆ ವರ್ಗ | ಜಿಲ್ಲೆಯೊಳಗಿನ ವರ್ಗಾವಣೆ | ಜಿಲ್ಲೆಯಿಂದ ಹೊರಗೆ ವರ್ಗಾವಣೆ |
|---|---|---|
| Iಎ, Iಬಿ ಮತ್ತು II | ರೂ. 3750 | ರೂ. 6000 |
| III ಮತ್ತು IV | ರೂ. 1500 | ರೂ. 3000 |

**9.2** ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 539–ಎ ರ ಉಪಬಂಧಗಳು ಈ ಮೇಲೆ ತಿಳಿಸಿರುವಷ್ಟರ ಮಟ್ಟಿಗೆ ಮಾರ್ಪಾಡಾಗತಕ್ಕದ್ದು.

**10. ವರ್ಗಾವಣೆಯಾದಾಗ ರಸ್ತೆಯ ಮೂಲಕ ಸ್ವಂತ ಕಾರು ಅಥವಾ ಬಾಡಿಗೆ ಟ್ಯಾಕ್ಸಿಯಲ್ಲಿ ಮಾಡಿದ ಪ್ರಯಾಣಕ್ಕಾಗಿ ಮೈಲೇಜ್ ಭತ್ಯೆ:**

**10.1** ರೂ.24,000 ಅಥವಾ ಅದಕ್ಕೂ ಮೇಲ್ಪಟ್ಟು ವೇತನ ಪಡೆಯುವ ಸರ್ಕಾರಿ ನೌಕರನು ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾವಣೆಯಾದಾಗ ಸ್ವಂತ ಕಾರಿನಲ್ಲಿ ಅಥವಾ ಟ್ಯಾಕ್ಸಿಯಲ್ಲಿ ಪ್ರಯಾಣ ಕೈಗೊಳ್ಳಬಹುದು ಮತ್ತು ಅವನ ಕುಟುಂಬದ ಸದಸ್ಯರ ಸಂಖ್ಯೆ ಎಷ್ಟೇ ಇರಲಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ 451ನೇ ನಿಯಮದಲ್ಲಿನ (4) ನೇ ಉಪನಿಯಮದನ್ವಯ ನಿಗದಿತವಾದ ದರದಲ್ಲಿ ಮೈಲೇಜ್ ಭತ್ಯೆಯನ್ನು ಕ್ಲೈಮ್ ಮಾಡಬಹುದು.

**10.2** ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 532 ನೇ ನಿಯಮದ ಉಪಬಂಧಗಳು ಈ ಮೇಲೆ ತಿಳಿಸಿರುವಷ್ಟರ ಮಟ್ಟಿಗೆ ಮಾರ್ಪಾಡಾಗತಕ್ಕದ್ದು.

**11. ರಸ್ತೆ ಮೂಲಕ ಪ್ರಯಾಣ – ಮೈಲು ಭತ್ಯೆ:**

**11.1** ಸರ್ಕಾರಿ ನೌಕರರು ಮೋಟಾರು ಸೈಕಲ್, ಸ್ಕೂಟರ್, ಟಾಂಗಾ, ಸೈಕಲ್–ರಿಕ್ಷಾ, ಮಾನವ ಎಳೆಯುವ ರಿಕ್ಷಾ ಇತ್ಯಾದಿಗಳ ಮೂಲಕ ಪ್ರಯಾಣ ಮಾಡಿದಾಗ ಈಗ ಲಭ್ಯವಿರುವ ಮೈಲೇಜುದರ ಪ್ರತಿ ಕಿಲೋ ಮೀಟರ್‌ಗೆ ರೂ. 1/–ಅನ್ನು ರೂ. 2/–(ಎರಡು ರೂಪಾಯಿಗಳು)ಗಳಿಗೆ ಹೆಚ್ಚಿಸಲಾಗಿದೆ ಮತ್ತು ಬೈಸಿಕಲ್/ ಕಾಲುನಡಿಗೆಯಲ್ಲಿ ಮಾಡಿದ ಪ್ರಯಾಣಕ್ಕೆ ಲಭ್ಯವಿರುವ ರಸ್ತೆ ಮೈಲೇಜು ದರವನ್ನು ಈಗಿರುವ ದರ ಕಿ.ಮೀಗೆ ರೂ.0.30 ರಿಂದ ರೂ.1/–(ಒಂದು ರೂಪಾಯಿ)ಗಳಿಗೆ ಹೆಚ್ಚಿಸಲಾಗಿದೆ.

**11.2** ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ 451ನೇ ನಿಯಮದ ಉಪಬಂಧಗಳು ಈ ಮೇಲೆ ತಿಳಿಸಿರುವಷ್ಟರ ಮಟ್ಟಿಗೆ ಮಾರ್ಪಾಡಾಗತಕ್ಕದ್ದು.

**12. ವರ್ಗಾವಣೆಯಾದಾಗ ಸ್ವಂತ ವಾಹನಗಳ ಸಾಗಣೆಗಾಗಿ ವಾಸ್ತವಿಕ ವೆಚ್ಚದ ಬಗ್ಗೆ:**

**12.1** ವರ್ಗಾವಣೆಯಾದಾಗ ಸರ್ಕಾರಿ ನೌಕರನು, ತನ್ನ ಸ್ವಂತ ಜವಾಬ್ದಾರಿಯ ಮೇಲೆ ತನ್ನ ವಾಹನವನ್ನು ಸಾಗಿಸುವುದಕ್ಕೆ ಸಂಬಂಧಿಸಿದ ವಾಸ್ತವಿಕ ವೆಚ್ಚವನ್ನು ಈ ಮುಂದಿನ ದರಗಳ ಪ್ರಕಾರ ಪಡೆಯಬಹುದು. ಆದರೆ ಪ್ರಯಾಣ ಮಾಡಿದ ದೂರವು 120 ಕಿ.ಮೀ. ಗಳನ್ನು ಮೀರಿರಬೇಕು ಮತ್ತು ಸರ್ಕಾರಿ ನೌಕರನ ದಕ್ಷತೆಯ ದೃಷ್ಟಿಯಿಂದ ಯಾವ ಹುದ್ದೆಯ ಸಂಬಂಧದಲ್ಲಿ ಆತನು ವಾಹನವನ್ನು ಹೊಂದಿರುವುದು ಅನುಕೂಲಕರವೋ ಆ ಹುದ್ದೆಗೆ ಸೇರಲು ಪ್ರಯಾಣ ಮಾಡಬೇಕು.

| ವೇತನ ಪ್ರಮಾಣ | ಅನುಮತಿಸಲಾದ ವಾಹನಗಳು |
|---|---|
| ರೂ. 38,100/– ಅಥವಾ ಅದಕ್ಕೂ ಮೇಲ್ಪಟ್ಟು | ಮೋಟಾರು ಕಾರು ಅಥವಾ ಮೋಟಾರು ಸೈಕಲ್ |
| ರೂ.16,800/– ಅಥವಾ ಅದಕ್ಕೂ ಮೇಲ್ಪಟ್ಟು ಆದರೆ ರೂ.38,100/– ಗಳಿಗಿಂತ ಕಡಿಮೆ | ಮೋಟಾರು ಸೈಕಲ್/ ಸ್ಕೂಟರ್, ಮೊಪೆಡ್ ಅಥವಾ ಸೈಕಲ್ |
| ರೂ. 16,800/– ಕ್ಕಿಂತ ಕಡಿಮೆ | ಸೈಕಲ್ |

**12.2** ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 532ನೇ ನಿಯಮದ ಉಪನಿಯಮ (3)(ಎ)ರಡಿ ಖಂಡ II ರಡಿಯ ಟಿಪ್ಪಣಿ 11 (3)ರ ಉಪಬಂಧಗಳು ಈ ಮೇಲೆ ತಿಳಿಸಿರುವಷ್ಟರ ಮಟ್ಟಿಗೆ ಮಾರ್ಪಾಡಾಗತಕ್ಕದ್ದು.

**13. ರೈಲು ಸಂಪರ್ಕವಿಲ್ಲದ ಸ್ಥಳಗಳಿಗೆ ಸ್ವಂತ ವಸ್ತುಗಳ ಸಾಗಾಣಿಕೆಗೆ ರಸ್ತೆ ಮೈಲು ಭತ್ಯೆ.**

**13.1** ರೈಲು ಸಂಪರ್ಕವಿಲ್ಲದ ಸ್ಥಳಗಳಿಗೆ ಸರ್ಕಾರಿ ನೌಕರರು ವರ್ಗಾವಣೆಯಾದಾಗ ಅನುಮತಿಸಲ್ಪಟ್ಟ ಗರಿಷ್ಟ ಪ್ರಮಾಣದ ಸ್ವಂತ ವಸ್ತುಗಳನ್ನು ಸಾಗಿಸುವ ಸಂದರ್ಭದಲ್ಲಿ ಈ ಕೆಳಕಂಡ ಪರಿಷ್ಕೃತ ದರಗಳಲ್ಲಿ ರಸ್ತೆ ಮೈಲೇಜನ್ನು ಪಡೆಯಲು ಅರ್ಹರಾಗಿರುತ್ತಾರೆ.

| ಪ್ರವರ್ಗ | ಪರಿಷ್ಕೃತ ದರ (ಪ್ರತಿ ಕಿ.ಮೀ.ಗೆ) |
|---|---|
| Iಎ, Iಬಿ ಮತ್ತು II | ರೂ.15–00 |
| III ಮತ್ತು IV | ರೂ.10–00 |

**13.2** ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 532ನೇ ನಿಯಮದ ಉಪಬಂಧಗಳು ಈ ಮೇಲೆ ತಿಳಿಸಿರುವಷ್ಟರ ಮಟ್ಟಿಗೆ ಮಾರ್ಪಡಿಸತಕ್ಕದ್ದು.

**14. ಸ್ವಗ್ರಾಮ ಪ್ರಯಾಣ ರಿಯಾಯಿತಿ:**

**14.1** ರೂ. 38,100/– ಅಥವಾ ಮೇಲ್ಪಟ್ಟು ವೇತನ ಪಡೆಯುವ ಸರ್ಕಾರಿ ನೌಕರರು, ಸಕ್ಷಮ ಪ್ರಾಧಿಕಾರಿಯ ನಿರ್ದಿಷ್ಟ ಮತ್ತು ಪೂರ್ವ ಅನುಮೋದನೆಯನ್ನು ಪಡೆದು ತರುವಾಯ, ಸ್ವಗ್ರಾಮ ಪ್ರಯಾಣ ರಿಯಾಯಿತಿಯ ಯೋಜನೆಯ ಮೇರೆಗೆ ರೈಲ್ವೆ ಸಂಪರ್ಕವಿರುವ ಸ್ಥಳಗಳ ನಡುವೆ ಸ್ವಗ್ರಾಮಕ್ಕೆ ತನ್ನ ಸ್ವಂತ ಕಾರಿನಲ್ಲಿ ಎಂದರೆ ತನ್ನ ಹೆಸರಿನಲ್ಲಿ ನೋಂದಾಯಿತವಾಗಿರುವ ಕಾರಿನಲ್ಲಿ ಪ್ರಯಾಣವನ್ನು ಕೈಗೊಳ್ಳಬಹುದು ಮತ್ತು (ಎ) ತನಗೆ ಮತ್ತು ತನ್ನ ಕುಟುಂಬದ ಸದಸ್ಯರಿಗಾಗಿ ಪ್ರಥಮ ದರ್ಜೆ ಪ್ರಯಾಣ ದರವನ್ನು ಅಥವಾ (ಬಿ) ತನ್ನ ಕುಟುಂಬದ ಸದಸ್ಯರ ಸಂಖ್ಯೆ ಎಷ್ಟೇ ಇರಲಿ ಅತ್ಯಂತ ಹತ್ತಿರದ ನೇರ ಮಾರ್ಗದ ಮೂಲಕ ಪ್ರತಿ ಕಿಲೋಮೀಟರ್‌ಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 451 ರ ಉಪನಿಯಮ (4)ರನ್ವಯ ನಿಗದಿತ ದರದಂತೆ ಸಿಂಗಲ್ ಮೈಲೇಜ್ ದರ ಇವೆರಡರಲ್ಲಿ ಯಾವುದು ಕಡಿಮೆಯೋ ಅದನ್ನು ಕ್ಲೈಮ್ ಮಾಡಬಹುದು.

**14.2** ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 549 ನೇ ನಿಯಮದ ಉಪಬಂಧಗಳು ಈ ಮೇಲೆ ತಿಳಿಸಿರುವಷ್ಟರ ಮಟ್ಟಿಗೆ ಮಾರ್ಪಾಡಾಗತಕ್ಕದ್ದು.

**15. ರಜೆ ಪ್ರಯಾಣ ರಿಯಾಯಿತಿ:**

**15.1** ಸರ್ಕಾರಿ ನೌಕರರಿಗೆ ಸೇವಾವಧಿಯಲ್ಲಿ ಒಮ್ಮೆ ಮಾತ್ರ ರಜೆ ಪ್ರಯಾಣ ರಿಯಾಯಿತಿ ಪಡೆಯಲು ಇದ್ದ ಅವಕಾಶವನ್ನು,ಅವರ ಇಡೀ ಸೇವಾ ಅವಧಿಯಲ್ಲಿ **ಎರಡು** ಬಾರಿಗೆ ಹೆಚ್ಚಿಸಲಾಗಿದೆ. ಮೊದಲನೆ ಬ್ಲಾಕ್ ಅವಧಿಯು ಸರ್ಕಾರಿ ನೌಕರನು ಸೇವೆಗೆ ಸೇರಿದ 10ನೇ ವರ್ಷದಿಂದ 15ನೇ ವರ್ಷದವರೆಗಿನ ಅವಧಿಯು ಮೊದಲನೆ ಬ್ಲಾಕ್ ಅವಧಿ ಆಗಿರುತ್ತದೆ ಮತ್ತು 16ನೇ ವರ್ಷದಿಂದ ವಯೋ ನಿವೃತ್ತಿ ಅಥವಾ ಸೇವೆ ಮುಕ್ತಾಯದವರೆಗಿನ ಅವಧಿಯು 2ನೇ ಬ್ಲಾಕ್ ಅವದಿಯಾಗಿರುತ್ತದೆ.

**15.2** ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 550ನೇ ನಿಯಮದಲ್ಲಿನ ಇತರೆ ಷರತ್ತು ಗಳು ಮುಂದುವರೆಯುತ್ತವೆ ಮತ್ತು ನಿಯಮ 550 ರ ಉಪಬಂಧಗಳು ಈ ಮೇಲೆ ತಿಳಿಸಿರುವಷ್ಟರ ಮಟ್ಟಿಗೆ ಮಾರ್ಪಾಡಾಗತಕ್ಕದ್ದು.

**16. ಪ್ರಭಾರ ಭತ್ಯೆ.**

**16.1** ಯಾವ ಹುದ್ದೆಯಲ್ಲಿ ಸರ್ಕಾರಿ ನೌಕರರನ್ನು ಹೆಚ್ಚಿನ ಪ್ರಭಾರದಲ್ಲಿ ಅಥವಾ ಸ್ವತಂತ್ರ ಪ್ರಭಾರದಲ್ಲಿ ಇರಿಸಲಾಗಿದೆಯೋ ಆ ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ಹಂತದ ಶೇಕಡಾ **7.5**ರಷ್ಟು ಪ್ರಭಾರ ಭತ್ಯೆಯನ್ನು ನೀಡಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 68ನ್ನು ಮಾರ್ಪಡಿಸಲಾಗಿದೆ.

**16.2** ಪ್ರಭಾರ ಭತ್ಯೆಯನ್ನು ಮಂಜೂರು ಮಾಡಲು ನಿಗದಿಪಡಿಸಿರುವ ಇತರೆ ಷರತ್ತುಗಳು ಮುಂದುವರೆದು ಅನ್ವಯಿಸುತ್ತವೆ. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 68ಕ್ಕೆ ಅವಶ್ಯಕ ತಿದ್ದುಪಡಿಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

**17. ಪ್ರತಿನಿಯೋಜನೆ ಮೇಲಿರುವ ಅಖಿಲ ಭಾರತ ಸೇವಾ ಅಧಿಕಾರಿಗಳು ಮತ್ತು ಕೇಂದ್ರ ಸರ್ಕಾರದ ನೌಕರರು/ಇತರ ರಾಜ್ಯ ಸರ್ಕಾರಿ ನೌಕರರು/ ಯುಜಿಸಿ/ಎಐಸಿಟಿಇ/ಎಫ್‌ಎನ್‌ಜೆಪಿಸಿ ವೇತನ ಶ್ರೇಣಿಯ ವ್ಯಾಪ್ತಿಗೊಳಪಡುವ ರಾಜ್ಯ ಸರ್ಕಾರಿ ನೌಕರರ ಪ್ರಯಾಣ ಭತ್ಯೆಯನ್ನು ಕ್ರಮಗೊಳಿಸುವುದು:**

**17.1** ಪ್ರಯಾಣ ಭತ್ಯೆಗೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 451ರಡಿಯಲ್ಲಿ ನಿರ್ದಿಷ್ಟ ಪಡಿಸಿದ ವಾಸ್ತವಿಕ ವೇತನ ಮಿತಿಯು ಈ ಕೆಳಗಿನವರಿಗೂ ಸಹ ಅನ್ವಯವಾಗುತ್ತದೆ;–

(ಎ) ರಾಜ್ಯ ಸರ್ಕಾರದಲ್ಲಿ ಸೇವೆ ಸಲ್ಲಿಸುತ್ತಿರುವ ಅಖಿಲ ಭಾರತ ಸೇವೆಗಳ ಅಧಿಕಾರಿಗಳಿಗೆ;

(ಬಿ) ರಾಜ್ಯ ಸರ್ಕಾರದಲ್ಲಿ ಪ್ರತಿನಿಯೋಜನೆ ಮೇರೆಗೆ ಸೇವೆ ಸಲ್ಲಿಸುತ್ತಿರುವ ಕೇಂದ್ರ ಸರ್ಕಾರ ಮತ್ತು ಇತರೆ ರಾಜ್ಯ ಸರ್ಕಾರಿ ನೌಕರರು ಮತ್ತು ಯಾರು ತಮ್ಮ ಹುದ್ದೆಗೆ ಅನ್ವಯಿಸುವ ವೇತನವನ್ನು ಮಾತೃ ಇಲಾಖೆಯಲ್ಲಿ ಇದ್ದಂತೆ; ಮತ್ತು

(ಸಿ) ಯುಜಿಸಿ/ಎಐಸಿಟಿಇ/ಐಸಿಎಆರ್/ ಎಫ್‌ಎನ್‌ಜೆಪಿಸಿ ವೇತನ ಶ್ರೇಣಿಯ ವ್ಯಾಪ್ತಿಗೊಳಪಡುವ ರಾಜ್ಯ ಸರ್ಕಾರಿ ನೌಕರರಿಗೆ.

**18.** ಈ ಮೇಲೆ ಹೇಳಿದ ಎಲ್ಲಾ ನಿಯಮಗಳಿಗೆ ಅವಶ್ಯಕ ತಿದ್ದುಪಡಿಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

**19. ಜಾರಿಗೆ ಬರುವ ದಿನಾಂಕ:** ಈ ಆದೇಶ **1ನೇ ಏಪ್ರಿಲ್ 2012** ರಿಂದ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಸ್.ಗೋಪಾಲಕೃಷ್ಣ**

ಸರ್ಕಾರದ ಜಂಟಿ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು)

**ಪಿ.ಆರ್. 1878**

## ಆರ್ಥಿಕ ಸಚಿವಾಲಯ

**ವಿಷಯ:** ಗಳಿಕೆ ರಜೆಯ ಗರಿಷ್ಠ ಮಿತಿ, ಗಳಿಕೆ ರಜೆ ಅಧ್ಯರ್ಪಿಸಿ ರಜೆ ನಗದೀಕರಣ ಸೌಲಭ್ಯ ಹಾಗು ನಿವೃತ್ತಿ ಸಮಯದಲ್ಲಿ ಪಡೆಯಬಹುದಾದ ರಜೆ ನಗದೀಕರಣಕ್ಕಾಗಿ ಅಧ್ಯರ್ಪಿಸುವ ಗಳಿಕೆ ರಜೆಯ ಗರಿಷ್ಠ ಮಿತಿ–ಪರಿಷ್ಕರಿಸುವ ಬಗ್ಗೆ.

**ಪ್ರಸ್ತಾವನೆ:**

ಪ್ರಸ್ತುತ ಜಾರಿಯಲ್ಲಿರುವ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 112(3)ನ್ನು ನಿಯಮ 113(5)ರೊಂದಿಗೆ ಓದಲಾದಂತೆ, ಪ್ರತಿ ಹಿಂದಿನ ವರ್ಷದ ಕೊನೆಯಲ್ಲಿ ಸರ್ಕಾರಿ ನೌಕರನ ಲೆಕ್ಕದಲ್ಲಿರುವ ರಜೆಯನ್ನು ಮುಂದಿನ ಅರ್ಧವರ್ಷಕ್ಕೆ ಮುಂದುವರೆಸತಕ್ಕದ್ದಾಗಿದ್ದು ಹಾಗೆ ಮುಂದುವರೆಸಿದ ರಜೆ ಮತ್ತು ಅರ್ಧವರ್ಷದ ರಜೆ ಇವೆರಡೂ ಸೇರಿ 240 ದಿನಗಳ ಮಿತಿಗೊಳಪಟ್ಟು ಸಂಗ್ರಹಣೆಗೆ ಅವಕಾಶವಿರುತ್ತದೆ ಹಾಗೂ ನಿಯಮ 118 ಎ (1)ರನ್ವಯ ವಯೋನಿವೃತ್ತಿಗೊಳ್ಳುವ ಸರ್ಕಾರಿ ನೌಕರನು ನಿವೃತ್ತಿ ದಿನಾಂಕದಂದು ಆತನ ಲೆಕ್ಕದಲ್ಲಿರುವ ಗಳಿಕೆ ರಜೆಯ ಗರಿಷ್ಠ 240 ದಿನಗಳ ಮಿತಿಗೊಳಪಟ್ಟು ರಜಾ ವೇತನಕ್ಕೆ ಸಮನಾದ ನಗದು ಮಂಜೂರು ಮಾಡಲು ಅವಕಾಶವಿರುತ್ತದೆ. ಮುಂದುವರೆದು ನಿಯಮ 118(2)ರನ್ವಯ ಸರ್ಕಾರಿ ನೌಕರನು ಎರಡು ವರ್ಷಗಳ ಬ್ಲಾಕ್ ಅವಧಿಯಲ್ಲಿ ಆತನ ಜಮೆಯಲ್ಲಿರುವ 30 ದಿನಗಳಿಗೆ ಮೀರದಂತೆ ಗಳಿಕೆ ರಜೆಯನ್ನು ಅಧ್ಯರ್ಪಿಸಿ, ರಜಾ ವೇತನಕ್ಕೆ ಸಮನಾದ ನಗದು ತೆಗೆದುಕೊಳ್ಳುವುದಕ್ಕೆ ಅವಕಾಶವಿರುತ್ತದೆ.

2011 ರ ಅಧಿಕಾರಿ ವೇತನ ಸಮಿತಿಯು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 113(5)ರನ್ವಯ ಗಳಿಕೆ ರಜೆಯ ಸಂಗ್ರಹಣೆಯ ಗರಿಷ್ಠ ಮಿತಿ 240 ದಿನಗಳನ್ನು 300 ದಿನಗಳಿಗೆ ಹೆಚ್ಚಿಸಲು ಮತ್ತು ನಿಯಮ 118 ಎ (1)ರನ್ವಯ ವಯೋನಿವೃತ್ತನಾಗುವ ಸರ್ಕಾರಿ ನೌಕರನ ನಿವೃತ್ತಿ ಸಮಯದಲ್ಲಿ ನಗದೀಕರಣಕ್ಕಾಗಿ ಅಧ್ಯರ್ಪಿಸುವ ಗಳಿಕೆ ರಜೆಯ ಗರಿಷ್ಠ ಮಿತಿಯನ್ನು 240 ದಿನಗಳಿಂದ 300 ದಿನಗಳವರೆಗೆ ಹೆಚ್ಚಿಸಲು ಹಾಗೂ ನಿಯಮ 118(2)ರನ್ವಯ ಪ್ರತಿ ವರ್ಷವೂ ಸರ್ಕಾರಿ ನೌಕರನ ಜಮೆಯಲ್ಲಿರುವ ರಜೆಯಲ್ಲಿ 15 ದಿನಗಳಿಗೆ ಮೀರದಂತೆ ಗಳಿಕೆ ರಜೆಯನ್ನು ಅಧ್ಯರ್ಪಿಸಿ ನಗದೀಕರಣ ಸೌಲಭ್ಯ ನೀಡಲು ಶಿಫಾರಸ್ಸು ಮಾಡಿದ್ದು, ಈ ಶಿಫಾರಸ್ಸುಗಳನ್ನು ಸರ್ಕಾರವು ಅಂಗೀಕರಿಸಿದೆ ಮತ್ತು ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 5 ಸೇನಿಸೇ 2012,ಬೆಂಗಳೂರು, ದಿನಾಂಕ: 14.06.2012.**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 112(3)ಮತ್ತು 113(5)ರನ್ವಯ ಪ್ರತಿ ಅರ್ಧ ವರ್ಷಗಳಲ್ಲಿ ಜಮೆ ಮಾಡುವ ಗಳಿಕೆ ರಜೆ ಮತ್ತು ಶೇಖರವಾದ ಗಳಿಕೆ ರಜೆಯು ಸೇರಿದಂತೆ ರಜಾ ಸಂಗ್ರಹಣೆಯ ಗರಿಷ್ಠ ಮಿತಿಯನ್ನು ದಿನಾಂಕ **01.04.2012ರಿಂದ** ಜಾರಿಗೆ ಬರುವಂತೆ 240 ದಿನಗಳ ಬದಲಾಗಿ **300 ದಿನಗಳಿಗೆ** ಹೆಚ್ಚಿಸಲಾಗಿದೆ.

2 **ಕ.ನಾ.ಸೇ.ನಿಯಮಾವಳಿ,** ನಿಯಮ 118ಎ(1)ರನ್ವಯ ವಯೋನಿವೃತ್ತನಾಗುವ ಸರ್ಕಾರಿ ನೌಕರನ ನಿವೃತ್ತಿ ಸಮಯದಲ್ಲಿ ನಗಧೀಕರಣಕ್ಕಾಗಿ ಅಧ್ಯರ್ಪಿಸುವ ಗಳಿಕೆ ರಜೆಯ ಗರಿಷ್ಠ ಮಿತಿಯನ್ನು **ದಿ:1–4–2012 ರಿಂದ** ಜಾರಿಗೆ ಬರುವಂತೆ 240 ದಿನಗಳಿಂದ **300 ದಿನಗಳವರೆಗೆ** ಹೆಚ್ಚಿಸಲಾಗಿದೆ.

3 **ಕ.ನಾ.ಸೇ.ನಿಯಮಾವಳಿ,** ನಿಯಮ 118(2) ಸೌಲಭ್ಯ ಪಡೆಯುವ ಬದಲಾಗಿ, ಪ್ರತಿ ಕ್ಯಾಲೆಂಡರ್ ವರ್ಷದಲ್ಲಿ (ಆಯಾ ವರ್ಷದ ಜನವರಿ 1ರಿಂದ ಡಿಸೆಂಬರ್ 31ರ ಒಳಗೆ) 15 ದಿನಗಳಿಗೆ ಮೀರದ ಗಳಿಕೆ ರಜೆಯನ್ನು ಆಧ್ಯರ್ಪಿಸಿ ರಜಾ ವೇತನಕ್ಕೆ ಸಮನಾದ ನಗದೀಕರಣ ಪಡೆಯಬಹುದಾದ ಸೌಲಭ್ಯವನ್ನು ದಿನಾಂಕ **01.01.2013ರಿಂದ** ಜಾರಿಗೆ ಬರುವಂತೆ ಆದೇಶಿಸಿದೆ.

4 **ಕ.ನಾ.ಸೇ.ನಿಯಮಾವಳಿ,** ನಿಯಮ 112, 113, 118 ಮತ್ತು 118ಎ ರಲ್ಲಿ ಗಳಿಕೆ ರಜೆ ಮತ್ತು ಗಳಿಕೆ ರಜೆ ನಗದೀಕರಣ ನಿಯಂತ್ರಣಕ್ಕೆ ಸಂಬಂಧಿಸಿದಂತೆ ವಿಧಿಸಿರುವ ಇತರೇ ಷರತ್ತುಗಳು ಮುಂದುವರೆಯುತ್ತವೆ.

5 ಈ ಆದೇಶವು ಸರ್ಕಾರದಿಂದ ಸಹಾಯಾನುದಾನ ಪಡೆಯುತ್ತಿರುವ ಸಂಸ್ಥೆಗಳ ನೌಕರರಿಗೂ ಅನ್ವಯಿಸುತ್ತದೆ.

6 ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 112, 113, 118 ಮತ್ತು 118ಎ ಗಳಿಗೆ ಅವಶ್ಯಕ ತಿದ್ದುಪಡಿಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಸ್.ಗೋಪಾಲಕೃಷ್ಣ**
ಸರ್ಕಾರದ ಜಂಟಿ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸೇವೆಗಳು)

**ಪಿ.ಆರ್. 1879**

## ಆರ್ಥಿಕ ಸಚಿವಾಲಯ

**ವಿಷಯ:** ಮಹಿಳಾ ಸರ್ಕಾರಿ ನೌಕರರಿಗೆ ಪ್ರಸೂತಿ ರಜೆ ಮಂಜೂರಾತಿ–ಹೆಚ್ಚಿಸುವ ಬಗ್ಗೆ.

**ಪ್ರಸ್ತಾವನೆ:**

2011 ರ ಅಧಿಕಾರಿ ವೇತನ ಸಮಿತಿಯು ಪ್ರಸೂತಿ ರಜೆಯನ್ನು ಈಗಿರುವ 135 ದಿನಗಳಿಂದ 180 ದಿನಗಳಿಗೆ ಹೆಚ್ಚಿಸುವ ಬಗ್ಗೆ ಮಾಡಿರುವ ಶಿಫಾರಸ್ಸನ್ನು ಸರ್ಕಾರವು ಅಂಗೀಕರಿಸಿದೆ ಮತ್ತು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 4 ಸೇನಿಸೇ 2012, ಬೆಂಗಳೂರು, ದಿನಾಂಕ :14.06.2012**

ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 135(1)ರ ಪ್ರಕಾರ ಮಹಿಳಾ ಸರ್ಕಾರಿ ನೌಕರರಿಗೆ ಆ ನಿಯಮದಲ್ಲಿ ವಿಧಿಸಲಾದ ನಿಬಂಧನೆಗಳಿಗೆ ಒಳಪಟ್ಟು 135 ದಿನಗಳ ಪ್ರಸೂತಿ ರಜೆಯ ಅವಧಿಯನ್ನು ದಿನಾಂಕ 01.04.2012ರಿಂದ ಜಾರಿಗೆ ಬರುವಂತೆ 180 (ಒಂದುನೂರ ಎಂಬತ್ತು) ದಿನಗಳಿಗೆ ಹೆಚ್ಚಿಸಲಾಗಿದೆ.

ದಿನಾಂಕ 01.04.2012ರಂದು ಅಥವಾ ನಂತರ ಪ್ರಸೂತಿ ರಜೆಯ ಮೇಲೆ ತೆರಳುವ ಮಹಿಳಾ ನೌಕರರಿಗೆ 180 ದಿನಗಳ ಪ್ರಸೂತಿ ರಜೆಗೆ ಅರ್ಹರಿರುತ್ತಾರೆ. ದಿನಾಂಕ 01.04.2012ಕ್ಕೂ ಪೂರ್ವದಲ್ಲಿ ಪ್ರಸೂತಿ ರಜೆಯ ಮೇಲೆ ತೆರಳಿದ್ದು ಆ ದಿನಾಂಕದಂದು 135 ದಿನಗಳನ್ನು ಪೂರೈಸದೇ ಇದ್ದು ಮತ್ತು ಇದೇ ರಜೆಯ ಮೇಲೆ ದಿನಾಂಕ 01.04.2012ರಂದು ಮುಂದುವರೆಯುತ್ತಿರುವ ಮಹಿಳಾ ನೌಕರರೂ 180 ದಿನಗಳ ಪ್ರಸೂತಿ ರಜೆಯ ಸೌಲಭ್ಯವನ್ನು ಪಡೆಯಲು ಅರ್ಹರಿರುತ್ತಾರೆ.

135 ದಿನಗಳ ಪ್ರಸೂತಿ ರಜೆಯನ್ನು ಪೂರೈಸಿ, ದಿನಾಂಕ: 01.04.2012ರಂದು ಬೇರೆ ವಿಧವಾದ ರಜೆಯ ಮೇಲೆ ಮುಂದುವರೆದಿರುವ ಮಹಿಳಾ ಸರ್ಕಾರಿ ನೌಕರರುಗಳು ಈ 180 ದಿನಗಳ ಪ್ರಸೂತಿ ರಜೆಯ ಸೌಲಭ್ಯವನ್ನು ಪಡೆಯಲು ಅರ್ಹರಾಗುವುದಿಲ್ಲ.

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 135(1)ಕ್ಕೆ ಅವಶ್ಯಕ ತಿದ್ದುಪಡಿಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಎಸ್. ಗೋಪಾಲಕೃಷ್ಣ**
ಸರ್ಕಾರದ ಜಂಟಿ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸೇವೆಗಳು)

**ಪಿ.ಆರ್. 1880**

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ಹನುಮಂತಪ್ಪ, ಲೆಕ್ಕಪರಿಶೋಧನಾಧಿಕಾರಿ, ರಾಜ್ಯ ಲೆಕ್ಕಪತ್ರ ಇಲಾಖೆ ಅಂದಿನ ಆಡಿಟ್ ಆಫೀಸರ್, ಜಿಲ್ಲಾ ಪಂಚಾಯತ್, ಇಂಜಿನಿಯರಿಂಗ್ ವಿಭಾಗ, ಕೊಪ್ಪಳ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:** ಅಪರ ನಿಬಂಧಕರು, ವಿಚಾರಣೆಗಳು–6, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಕಂಪ್ಲೇಂಟ್/ಉಪಲೋಕ್/ಜಿಎಲ್‌ಬಿ–59/2005/ಎಆರ್‌ಇ–6 ದಿ: 19.5.2012 ಮತ್ತು ಉಪ ಲೋಕಾಯುಕ್ತರ ವರದಿ ದಿ: 17.5.2012..

**ಪ್ರಸ್ತಾವನೆ:**

ಅಪರ ನಿಬಂಧಕರು, ವಿಚಾರಣೆಗಳು–6, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದೊಂದಿಗೆ ಕಳುಹಿಸಿದ ಉಪ ಲೋಕಾಯುಕ್ತರ ವರದಿಯಲ್ಲಿ ಶ್ರೀ ಹನುಮಂತಪ್ಪ, ಲೆಕ್ಕಪರಿಶೋಧನಾಧಿಕಾರಿ, ರಾಜ್ಯ ಲೆಕ್ಕಪತ್ರ ಇಲಾಖೆ ಇವರು ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಕೊಪ್ಪಳ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಲೋಕೋಪಯೋಗಿ ವಿಭಾಗ, ಕೊಪ್ಪಳ ಕಾರ್ಯಾಲಯದ ನಬಾರ್ಡ್ ಯೋಜನೆ ಕಾಮಗಾರಿ ಗುತ್ತಿಗೆ ಪಡೆಯಲು ಗುತ್ತಿಗೆದಾರರಾದ ಶ್ರೀ ಜಿ.ಎನ್.ಹನುಮಂತಪ್ಪ ಇವರು ಫೇಕ್ ವರ್ಕ್‌ಡನ್ ಸರ್ಟಿಫಿಕೇಟ್ ಅನ್ನು ಹಾಜರುಪಡಿಸಿ ಮೋಸದಿಂದ ಗುತ್ತಿಗೆಯನ್ನು ಪಡೆದಿದ್ದಾರೆಂದು ಇದಕ್ಕೆ ಶ್ರೀ ಹನುಮಂತಪ್ಪ, ಆಡಿಟ್ ಆಫೀಸರ್, ಜಿಲ್ಲಾ ಪಂಚಾಯತ್, ಇಂಜಿನಿಯರಿಂಗ್ ವಿಭಾಗ, ಕೊಪ್ಪಳ ಇವರು ಫೇಕ್ ವರ್ಕ್‌ಡನ್ ಸರ್ಟಿಫಿಕೇಟ್‌ನ ಜೆರಾಕ್ಸ್ ಪ್ರತಿಯನ್ನು ಅಟೆಸ್ಟ್ ಮಾಡಿ ದೃಢೀಕರಿಸಿರುವುದು ಇವರ ಟೆಂಡರ್ ಅನುಮೋದಿಸಲು ಆಧಾರವೆಂದು ಇದರಿಂದ ಶ್ರೀ ಹನುಮಂತಪ್ಪ ಅಂದಿನ ಆಡಿಟ್ ಆಫೀಸರ್ ಕರ್ತವ್ಯ ಲೋಪವೆಸಗಿದ್ದಾರೆಂಬ ಆರೋಪವು ಮೇಲ್ನೋಟಕ್ಕೆ ಸ್ಥಿರಪಟ್ಟಿದ್ದು ಇವರು ನಿಯಮಗಳನ್ನು ಉಲ್ಲಂಘಿಸಿರುವುದರಿಂದ ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 3(1)ರನ್ವಯ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14–ಎ ರನ್ವಯ ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತಕ್ಕೆ ವಹಿಸುವಂತೆ ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಪ್ರಕರಣವನ್ನು ಪೂರ್ಣ ಪ್ರಮಾಣದ ವಿಚಾರಣೆಗಾಗಿ ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಆಇ 162 ರಾಲೆಪ 2012 ಬೆಂಗಳೂರು, ದಿನಾಂಕ:21.06.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14–ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಹನುಮಂತಪ್ಪ, ಲೆಕ್ಕಪರಿಶೋಧನಾಧಿಕಾರಿ, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಜಂಟಿ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರ ಮೂಲಕ ನಡೆಸಬೇಕೆಂದು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಲ್. ರಮೇಶ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

**ಪಿ.ಆರ್. 1874**

## ಕಾರ್ಮಿಕ ಸಚಿವಾಲಯ

**ವಿಷಯ :** ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯಲ್ಲಿ ಹೊಸ ಹುದ್ದೆಗಳನ್ನು ಸೃಜಿಸಿ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :**
1. ಕರ್ನಾಟಕ ವಿಧಾನ ಮಂಡಲದ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಮಿತಿಯ 14ನೇ ವರದಿಯಲ್ಲಿನ ಶಿಫಾರಸ್ಸು.
2. ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ: ಈಎಸ್‌ಟಿ-1/ಆರ್‌ಪಿಪಿ/ಸಿಆರ್-5/2010-11, ದಿ:23-07-11. ಮತ್ತು ತದನಂತರದ ಸ್ಪಷ್ಟೀಕರಣ ಪತ್ರಗಳು ದಿ: 01-10-11, 31-10-11 ಮತ್ತು 22-12-11

**ಪ್ರಸ್ತಾವನೆ:-**

1. ಮೇಲೆ (1) ರಲ್ಲಿ ಓದಲಾದ ಕರ್ನಾಟಕ ವಿಧಾನ ಮಂಡಲದ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಮಿತಿಯ 14ನೇ ವರದಿಯಲ್ಲಿ ಕಾರ್ಖಾನೆಗಳು ಮತ್ತು ಬಾಯ್ಲರುಗಳ ಇಲಾಖೆಯಲ್ಲಿ ಅಗತ್ಯ ಹುದ್ದೆಗಳನ್ನು ಸೃಜಿಸಿ ಇಲಾಖೆಯನ್ನು ಬಲಪಡಿಸಲು ಸಮಿತಿಯು ಶಿಫಾರಸ್ಸು ಮಾಡಿತ್ತು.

2. ಮೇಲೆ (2) ರಲ್ಲಿ ಓದಲಾದ ದಿನಾಂಕ: 23-07-2011 ರ ಪತ್ರದಲ್ಲಿ ನಿರ್ದೇಶಕರು, ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ ರವರು ಪ್ರಸ್ತಾವನೆ ಸಲ್ಲಿಸುತ್ತಾ ಔದ್ಯೋಗಿಕ ಬೆಳವಣಿಗೆಯ ಕಾರಣದಿಂದ ಎಲ್ಲಾ ಕಛೇರಿಗಳಲ್ಲಿ ಕೆಲಸದ ತೀವ್ರ ಒತ್ತಡ ಉಂಟಾಗಿದ್ದು, ದಿನನಿತ್ಯದ ಕೆಲಸಕಾರ್ಯಗಳನ್ನು ಸಮರ್ಥವಾಗಿ ನಿಭಾಯಿಸಲು ಅಸಾಧ್ಯವಾಗಿರುವುದರಿಂದ, ಈ ಒತ್ತಡವನ್ನು ಸ್ವಲ್ಪ ಮಟ್ಟಿಗೆ ಸುಧಾರಿಸಲು 14 ಹೊಸ ಕಛೇರಿಗಳನ್ನು ಪರಿವೀಕ್ಷಣಾಧಿಕಾರಿಗಳು ಮತ್ತು ಪೂರಕ ಸಿಬ್ಬಂದಿಯೊಡನೆ ಸ್ಥಾಪಿಸಲು ಪ್ರಸ್ತಾಪಿಸಿರುತ್ತಾರೆ. ಈ ಉದ್ದೇಶ ಸಾಧನೆಗಾಗಿ ಇತ್ತೀಚೆಗೆ ಇಲಾಖೆ ಸೇವಾ ಶುಲ್ಕವನ್ನು ದ್ವಿಗುಣಗೊಳಿಸಿರುವುದನ್ನು ಗಮನಕ್ಕೆ ತರುತ್ತಾ, ಈ ಪ್ರಸ್ತಾವನೆ ಮಂಜೂರಾತಿಯಿಂದ ರಾಜ್ಯ ಖಜಾನೆಗೆ ಹೆಚ್ಚಿನ ಆರ್ಥಿಕ ಹೊರೆ ಉಂಟಾಗುವುದಿಲ್ಲವೆಂಬುದನ್ನು ಸಹ ತಿಳಿಸಿರುತ್ತಾರೆ. ಈ ಎಲ್ಲಾ ಹುದ್ದೆಗಳನ್ನು ಮಂಜೂರು ಮಾಡಿದಲ್ಲಿ, ರಾಜ್ಯದಲ್ಲಿ ಪ್ರತೀ ಪರಿವೀಕ್ಷಣಾಧಿಕಾರಿಯ ಕಾರ್ಯ ವ್ಯಾಪ್ತಿಯಲ್ಲಿ ಈಗಿರುವ ಸರಾಸರಿ 450-500 ಕಾರ್ಖಾನೆಗಳ ಸಂಖ್ಯೆಯನ್ನು ಸರಾಸರಿ 300-350 ಕ್ಕೆ ಇಳಿಸಿ ಕೆಲಸದ ಒತ್ತಡವನ್ನು ಸ್ವಲ್ಪ ಮಟ್ಟಿಗೆ ಕಡಿಮೆ ಮಾಡಲು ಸಾಧ್ಯವಾಗುತ್ತದಾದರೂ, ಕೆಲಸ ಕಾರ್ಯಗಳ ಸಮರ್ಥ ನಿರ್ವಹಣೆಗೆ ಅಖಿಲ ಭಾರತ ಮಟ್ಟದಂತೆ ಪ್ರತಿ ಪರಿವೀಕ್ಷಣಾಧಿಕಾರಿ ವ್ಯಾಪ್ತಿಗೆ 150 ಕಾರ್ಖಾನೆಗಳನ್ನು ತರಲು ಸಾಧ್ಯವಾಗುತ್ತಿಲ್ಲವೆಂದು ನಿರ್ದೇಶಕರು ತಿಳಿಸಿರುತ್ತಾರೆ.

3. ಹೊಸ ಕಛೇರಿಗಳನ್ನು ಕಾರ್ಖಾನೆಗಳ ಸಂಖ್ಯೆ ಜಾಸ್ತಿಯಿರುವ ಸ್ಥಳಗಳಲ್ಲಿ ಸ್ಥಾಪಿಸಿ ಕಾರ್ಯ ವ್ಯಾಪ್ತಿಯನ್ನು ಪರಿಷ್ಕರಿಸಿ ಪರಿವೀಕ್ಷಣಾಧಿಕಾರಿಗಳ ಕೆಲಸದ ಒತ್ತಡವನ್ನು ಕಡಿಮೆ ಮಾಡವುದಾಗಿ ಪ್ರಸ್ತಾಪಿಸಿರುತ್ತಾರೆ. ಅಂತಹ ಕಛೇರಿಗಳನ್ನು ಕ್ರಮವಾಗಿ ಕೋಲಾರ, ರಾಮನಗರ, ಹಾಸನ, ಉಡುಪಿ, ಕೊಪ್ಪಳ, ಚಿತ್ರದುರ್ಗ, ಗೋಕಾಕ್ ಮತ್ತು ಗದಗ್‌ನಲ್ಲಿ ತಲಾ 01 ರಂತೆ ಹಾಗೂ ಬೆಂಗಳೂರು ನಗರದಲ್ಲಿ 06 ಹೀಗೆ ಒಟ್ಟು 14 ಕಛೇರಿಗಳನ್ನು ಸ್ಥಾಪಿಸಿ ಕಾರ್ಯಾರಂಭ ಮಾಡಲು ಗುರುತಿಸಿದ್ದು, ಅದಕ್ಕಾಗಿ ಈ ಕೆಳಗಿನಂತೆ ಒಟ್ಟು 68 ಹುದ್ದೆಗಳನ್ನು ಸೃಜಿಸಿ ಮಂಜೂರಾತಿ ನೀಡಲು ಕೋರಿರುತ್ತಾರೆ.

| ಕ್ರಸಂ. | ಹುದ್ದೆಗಳ ವಿವರ | ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ |
|---|---|---|---|
| 1 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು | ರೂ. 22800-43200 | 14 |
| 2 | ಪತ್ರಾಂಕಿತ ವ್ಯವಸ್ಥಾಪಕರು | ರೂ. 21600-40050 | 01 |
| 3 | ಹಿರಿಯ ಕಾರ್ಯನಿರ್ವಾಹಕ ಹಾಗೂ ಆಡಳಿತ ಸಹಾಯಕರು | ರೂ. 21600-40050 | 06 |
| 4 | ಕಾರ್ಯನಿರ್ವಾಹಕ ಹಾಗೂ ಆಡಳಿತ ಸಹಾಯಕರು | ರೂ. 20000-36300 | 05 |
| 5 | ಪ್ರಥಮ ದರ್ಜೆ ಸಹಾಯಕರು | ರೂ. 14550-26700 | 14 |
| 6 | ದ್ವಿತೀಯ ದರ್ಜೆಸಹಾಯಕರು | ರೂ. 11600-21000 | 14 |
| 7 | ಗ್ರೂಪ್ - ಡಿ ಹುದ್ದೆಗಳು | ರೂ. 9600-14550 | 14 |
| | | **ಒಟ್ಟು** | **68** |

4. ಅವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 49 ಕಾಬಾಸೇ 2011, ಬೆಂಗಳೂರು, ದಿನಾಂಕ: 21-07-2012**

ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ನಿರ್ದೇಶಕರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲು ಮಂಜೂರಾತಿ ನೀಡಿ ಆದೇಶಿಸಿದೆ.

| ಕ್ರ.ಸಂ. | ಹುದ್ದೆಗಳ ವಿವರ | ವೇತನ ಶ್ರೇಣಿ | ಮಂಜೂರಾತಿ ನೀಡಿರುವ ಹುದ್ದೆಗಳ ಸಂಖ್ಯೆ |
|---|---|---|---|
| 1 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು | ರೂ. 22800-43200 | 10 |
| 2 | ಪತ್ರಾಂಕಿತ ವ್ಯವಸ್ಥಾಪಕರು | ರೂ. 21600-40050 | 01 |
| 3 | ಕಾರ್ಯನಿರ್ವಾಹಕ ಹಾಗೂ ಆಡಳಿತ ಸಹಾಯಕರು | ರೂ. 20000-36300 | 05 |
| 4 | ಪ್ರಥಮ ದರ್ಜೆ ಸಹಾಯಕರು | ರೂ. 14550-26700 | 03 |
| 5 | ದ್ವಿತೀಯ ದರ್ಜೆಸಹಾಯಕರು | ರೂ. 11600-21000 | 05 |
| | | **ಒಟ್ಟು** | **24** |

ಈ ಬಾಬ್ತು ವೆಚ್ಚವನ್ನು "**ಲೆಕ್ಕಶೀರ್ಷಿಕೆ 2230-01-102-0-01 ಇನ್ಸ್‌ಪೆಕ್ಟರ್ ಅಫ್ ಫ್ಯಾಕ್ಟರೀಸ್(ಯೋಜನೇತರ ವೆಚ್ಚಗಳು)**" ಅಡಿಯಲ್ಲಿ ಭರಿಸತಕ್ಕದ್ದು. ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳ ಅನುಸಾರ ಸದರಿ ಹುದ್ದೆಗಳನ್ನು ಭರ್ತಿ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ.ಆಇ 229 ವೆಚ್ಚ-9/2012, ದಿನಾಂಕ: 07-07-2012 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯದ ರಾಜ್ಯಪಾಲರ ಹೆಸರಿನಲ್ಲಿ ಮತ್ತು ಅವರ ಆದೇಶಾನುಸಾರ

**ಬಿ.ಶಿವರಾಮ ಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ
(ಕಾರ್ಖಾನೆಗಳು ಮತ್ತು ಬಾಯ್ಲರುಗಳು)

**ಪಿ.ಆರ್. 1908**

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** 'ಬೆಂಗಳೂರು ಐ.ಟಿ. ಬಿಜ್ -2012'ರ ಕಾರ್ಯಕ್ರಮದ ಅಂಗವಾಗಿ ಏರ್ಪಡಿಸಲಾಗಿರುವ ಮಾಹಿತಿ ತಂತ್ರಜ್ಞಾನದಲ್ಲಿ ಗ್ರಾಮೀಣ ವಿದ್ಯಾರ್ಥಿಗಳಿಗಾಗಿ 'ರಸಪ್ರಶ್ನೆ' ಕಾರ್ಯಕ್ರಮವನ್ನು ನಡೆಸಲು ಅನುದಾನ ಬಿಡುಗಡೆ ಬಗ್ಗೆ - ಆದೇಶ.

**ಓದಲಾಗಿದೆ :** ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಲಾಯದ ಪತ್ರ ಸಂಖ್ಯೆ: ಮಾತಂನಿ/ಜೂ.ಪ್ರೋ/15/ಗ್ರಾರಪ್ರ/ 2012/211 ದಿನಾಂಕ:30-06-2012.

**ಪ್ರಸ್ತಾವನೆಃ**

ಮೇಲೆ ಓದಲಾದ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶಕರ ದಿನಾಂಕ: 30-06-2012ರ ಪತ್ರದಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯು ಪ್ರತಿ ವರ್ಷವು ಏರ್ಪಡಿಸುವ ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಹಾಗೂ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ, ರಾಷ್ಟ್ರೀಯ ಮತ್ತು ರಾಜ್ಯ ವಿದ್ಯಾರ್ಥಿಗಳಲ್ಲಿ ಇತ್ತೀಚಿನ ದಿನಗಳಲ್ಲಿ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಗಣಕ ಯಂತ್ರ ಜ್ಞಾನಕ್ಕೆ ಉಂಟಾಗುತ್ತಿರುವ ತಂತ್ರಜ್ಞಾನಗಳ ಬದಲಾವಣೆಗಳ ಅರಿವು ಮೂಡಿಸಲು ಐಟಿ ಕ್ವಿಜ್ ಕಾರ್ಯಕ್ರಮವನ್ನು ದಿ:18-10-2012ರಂದು ಬೆಂಗಳೂರಿನಲ್ಲಿ ನಡೆಯುವ ಬೆಂಗಳೂರು ಐಟಿ ಬಿಜ್-2012ರ ಅಂಗವಾಗಿ ಪ್ರತಿ ವರ್ಷದಲ್ಲಿಯೂ ನಡೆಯುವಂತೆ 2012-13ನೇ ಸಾಲಿನಂತೆ ನಡೆಸಲಾಗುತ್ತದೆ.

ಬೆಂಗಳೂರು ಐಟಿ..ಬಿಜ್-2012 ಕಾರ್ಯಕ್ರಮದಲ್ಲಿ ವಿದ್ಯಾರ್ಥಿಗಳಿಗಾಗಿ ಸ್ಪರ್ಧಾತ್ಮಕ ರಸಪ್ರಶ್ನೆ ಕಾರ್ಯಕ್ರಮವನ್ನು ನಡೆಸುವ ಉದ್ದೇಶದಿಂದ ಜಿಲ್ಲಾಮಟ್ಟದಲ್ಲಿ, ರಾಜ್ಯಮಟ್ಟದಲ್ಲಿ ಹಾಗೂ ರಾಷ್ಟ್ರೀಯ ಮಟ್ಟದಲ್ಲಿ ಮಾಹಿತಿ ತಂತ್ರಜ್ಞಾನದಲ್ಲಿ ಮಕ್ಕಳ ಕಲಿಕೆ ಜ್ಞಾನವನ್ನು ವೃದ್ಧಿಸಲು / ಉತ್ತೇಜಿಸಲು ಅನುವಾಗದಂತೆ ಐಟಿ. ಕ್ವಿಜ್ ಕಾರ್ಯಕ್ರಮವನ್ನು ನಡೆಸಲು ಒಟ್ಟು ರೂ.18,85,000/- (+ರೂ.3,50,000/- ಗಳನ್ನು ಐಟಿ.ಕ್ವಿಜ್ ಕಾರ್ಯಕ್ರಮಕ್ಕೆ ಹೊರರಾಜ್ಯಗಳಿಗೆ) ಒಟ್ಟು ರೂ.18,85,000+3,50,000=22,35,000/- ಅನುದಾನವನ್ನು ಲೆಕ್ಕ ಶೀರ್ಷಿಕೆ 3451-00-090-2-0-01-059 ಇತರೆ

ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಹಾಗೂ ಅಭಿವೃದ್ಧಿಯಡಿಯಲ್ಲಿ 2012–13ನೇ ಸಾಲಿನಲ್ಲಿ ಒದಗಿಸಲಾಗಿರುವ ಅನುದಾನದಲ್ಲಿ ಬಿಡುಗಡೆ ಮಾಡಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 94 ಎಂಐಎಸ್ 2012, ಬೆಂಗಳೂರು, ದಿನಾಂಕ:30–06–2012**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು **'ಬೆಂಗಳೂರು ಐ.ಟಿ. ಬಿಜ್–2012'ರ ಮೇಳದ** ಅಂಗವಾಗಿ ಮಾಹಿತಿ ತಂತ್ರಜ್ಞಾನದಲ್ಲಿ ಗ್ರಾಮೀಣ ವಿದ್ಯಾರ್ಥಿಗಳಿಗಾಗಿ **'ರಸಪ್ರಶ್ನೆ'** ಕಾರ್ಯಕ್ರಮವನ್ನು ನಡೆಸಲು ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು ಇವರಿಗೆ ರೂ.18,85,000/– ಲಕ್ಷಗಳ (ಹದಿನೆಂಟು ಲಕ್ಷದ ಎಂಬತ್ತೈದು ಸಾವಿರ ರೂಪಾಯಿಗಳು ಮಾತ್ರ) (+ರೂ.3,50,000/– ಗಳನ್ನು ಐಟಿ.ಕ್ವಿಜ್ ಕಾರ್ಯಕ್ರಮಕ್ಕೆ ಹೊರರಾಜ್ಯಗಳಿಗೆ) ಒಟ್ಟು ರೂ.18,85,000+3,50,000=22,35,000/– ಅನುದಾನವನ್ನು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ [ಅನುಬಂಧದಲ್ಲಿ ತೋರಿಸಿರುವಂತೆ].

ಈ ವೆಚ್ಚವನ್ನು 2012–13ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **"3451–00–090–2–01 ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ – 059 – ಇತರೆ ಖರ್ಚು (ಯೋಜನೆ)" ಇದರಡಿಯಲ್ಲಿ** ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಈ ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರಗಳನ್ನು ರಾಜ್ಯದ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರುಗಳಿಂದ ಹಾಗೂ ಕಿಯೋನಿಕ್ಸ್ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಿಂದ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2012, ದಿ:27–04–2012ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಅದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಇ. ರಾಮಕೃಷ್ಣಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 94 ಎಂಐಎಸ್ 2012, ದಿನಾಂಕ:30–06–2012**

| ಕ್ರಮ ಸಂಖ್ಯೆ | ಸಾರ್ವಜನಿಕ ಶಿಕ್ಷಣ ಇಲಾಖೆಯ ಜಿಲ್ಲಾ ಉಪನಿರ್ದೇಶಕರುಗಳು | ಪ್ರಾದೇಶಿಕ ಮಟ್ಟಕ್ಕಾಗಿ ಆಯ್ಕೆಯಾದ ವಿದ್ಯಾರ್ಥಿಗಳ ಸಂಖ್ಯೆ [ತಂಡಗಳು] | ರಸಪ್ರಶ್ನೆ ಪೂರ್ಣ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಿರುವ ಅನುದಾನ |
|---|---|---|---|
| 1 | ಬೆಂಗಳೂರು ಉತ್ತರ | 12 ತಂಡಗಳು | 20000.00 |
| 2 | ಬಾಗಲಕೋಟೆ | 25 ತಂಡಗಳು | 35000.00 |
| 3 | ಬೆಂಗಳೂರು ಗ್ರಾಮಾಂತರ | 25 ತಂಡಗಳು | 35000.00 |
| 4 | ಬೆಂಗಳೂರು ದಕ್ಷಿಣ | 12 ತಂಡಗಳು | 20000.00 |
| 5 | ರಾಮನಗರ | 25 ತಂಡಗಳು | 35000.00 |
| 6 | ಚಿಕ್ಕೋಡಿ [ಬೆಳಗಾವಿ ಉತ್ತರ] | 12 ತಂಡಗಳು | 20000.00 |
| 7 | ಬೆಳಗಾವಿ ದಕ್ಷಿಣ | 12 ತಂಡಗಳು | 20000.00 |
| 8 | ಬಳ್ಳಾರಿ | 25 ತಂಡಗಳು | 55000.00 |

| ಕ್ರಮ ಸಂಖ್ಯೆ | ಸಾರ್ವಜನಿಕ ಶಿಕ್ಷಣ ಇಲಾಖೆಯ ಜಿಲ್ಲಾ ಉಪನಿರ್ದೇಶಕರುಗಳು | ಪ್ರಾದೇಶಿಕ ಮಟ್ಟಕ್ಕಾಗಿ ಆಯ್ಕೆಯಾದ ವಿದ್ಯಾರ್ಥಿಗಳ ಸಂಖ್ಯೆ [ತಂಡಗಳು] | ರಸಪ್ರಶ್ನೆ ಪೂರ್ಣ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಿರುವ ಅನುದಾನ |
|---|---|---|---|
| 9 | ಬೀದರ್ | 25 ತಂಡಗಳು | 70000.00 |
| 10 | ಬಿಜಾಪುರ | 25 ತಂಡಗಳು | 40000.00 |
| 11 | ಚಾಮರಾಜನಗರ | 25 ತಂಡಗಳು | 35000.00 |
| 12 | ಚಿಕ್ಕಮಗಳೂರು | 25 ತಂಡಗಳು | 35000.00 |
| 13 | ಚಿಕ್ಕಬಳ್ಳಾಪುರ | 25 ತಂಡಗಳು | 35000.00 |
| 14 | ಚಿತ್ರದುರ್ಗ | 25 ತಂಡಗಳು | 35000.00 |
| 15 | ಕೂರ್ಗ್ | 25 ತಂಡಗಳು | 35000.00 |
| 16 | ದಕ್ಷಿಣ ಕನ್ನಡ | 25 ತಂಡಗಳು | 60000.00 |
| 17 | ಗದಗ | 25 ತಂಡಗಳು | 35000.00 |
| 18 | ಯಾದಗಿರ್ | 25 ತಂಡಗಳು | 50000.00 |
| 19 | ಹಾಸನ | 25 ತಂಡಗಳು | 35000.00 |
| 20 | ಹಾವೇರಿ | 25 ತಂಡಗಳು | 60000.00 |
| 21 | ಕೋಲಾರ | 25 ತಂಡಗಳು | 35000.00 |
| 22 | ಕೊಪ್ಪಳ | 25 ತಂಡಗಳು | 35000.00 |
| 23 | ಮಂಡ್ಯ | 25 ತಂಡಗಳು | 35000.00 |
| 24 | ರಾಯಚೂರು | 25 ತಂಡಗಳು | 55000.00 |
| 25 | ಶಿವಮೊಗ್ಗ | 25 ತಂಡಗಳು | 35000.00 |
| 26 | ಮಧುಗಿರಿ | 25 ತಂಡಗಳು | 30000.00 |
| 27 | ಉತ್ತರಕನ್ನಡ | 12 ತಂಡಗಳು | 35000.00 |
| 28 | ಶಿರಸಿ | 12 ತಂಡಗಳು | 35000.00 |
| 29 | ದಾವಣಗೆರೆ | 25 ತಂಡಗಳು | 35000.00 |
| 30 | ಉಡುಪಿ | 25 ತಂಡಗಳು | 60000.00 |
| 31 | ಗುಲ್ಬರ್ಗ | 25 ತಂಡಗಳು | 50000.00 |
| | **ಒಟ್ಟು** | | **1205000.00** |

| ಕ್ರಮ ಸಂಖ್ಯೆ | ಸಾರ್ವಜನಿಕ ಶಿಕ್ಷಣ ಇಲಾಖೆಯ ಜಿಲ್ಲಾ ಉಪನಿರ್ದೇಶಕರುಗಳು | ಪ್ರಾದೇಶಿಕ ಮಟ್ಟದಲ್ಲಿ ಭಾಗವಹಿಸುತ್ತಿರುವ ತಂಡಗಳು | ಪ್ರಾದೇಶಿಕ ಹಂತದ ರಸಪ್ರಶ್ನೆ ಕಾರ್ಯಕ್ರಮ ನಡೆಸಲು 3 ಜಿಲ್ಲೆಗಳಿಗೆ ಬಿಡುಗಡೆ ಮಾಡಲಾಗಿರುವ ಹೆಚ್ಚುವರಿ ಅನುದಾನ |
|---|---|---|---|
| 1 | ಧಾರವಾಡ | 300 ತಂಡಗಳು | 75000.00 |
| 2 | ಮೈಸೂರು | 225 ತಂಡಗಳು | 70000.00 |
| 3 | ತುಮಕೂರು | 250 ತಂಡಗಳು | 70000.00 |
| | **ಒಟ್ಟು** | | **215000.00** |

| ಸಾರ್ವಜನಿಕ ಶಿಕ್ಷಣ ಇಲಾಖೆಯ ಜಿಲ್ಲಾ ಉಪನಿರ್ದೇಶಕರುಗಳಿಗೆ ಬಿಡುಗಡೆ ಮಾಡಲಾದ ಹಣ ರೂ.1,42,00,00 | | |
|---|---|---|
| 1 | ಸಭಾಂಗಣ | 115000 |
| 2 | ಸಾರ್ವಜನಿಕ ಶಿಕ್ಷಣ ಇಲಾಖೆಯ ಜಿಲ್ಲಾ ಉಪನಿರ್ದೇಶಕರುಗಳಿಗೆ ಬಿಡುಗಡೆ ಮಾಡಲಾದ ಹಣ | 1420000 |
| 3 | ದೂರದರ್ಶನ ಪ್ರಸಾರ | 150000 |
| 4 | ಪ್ರಮಾಣ ಪತ್ರ, ರಾಜ್ಯಗಳಲ್ಲಿ ಸಭಾಂಗಣ ಮತ್ತು ಪ್ರಶ್ನೆ ಪತ್ರಿಕೆಗಳು | 200000.00 |
| **ಒಟ್ಟು ಮೊತ್ತ ರೂ.** | | **1885000.00** |
| 5 | ಇತರೆ ಐದು ರಾಜ್ಯಗಳಲ್ಲಿ ಸಭಾಂಗಣ ಮತ್ತು refreshment ಗಳಿಗಾಗಿ | 350000 |
| **ಒಟ್ಟು ಮೊತ್ತ ರೂ.** | | **2235000.00** |

**ಇ. ರಾಮಕೃಷ್ಣಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾತಂ, ಜೈತಂ ಮತ್ತು ವಿತಂ ಇಲಾಖೆ

**ಪಿ.ಆರ್. 1931**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಕಿಶೋರ್ ಮೆಂಗಾಜಿ, ಹಿರಿಯ ತಜ್ಞರು (ಮೂಳೆ), ಸಾರ್ವಜನಿಕ ಆಸ್ಪತ್ರೆ, ಔರಾದ್ ಇವರನ್ನು ಅನಧಿಕೃತ ಗೈರು ಹಾಜರಿಯ ಆರೋಪದ ಮೇರೆಗೆ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಆಕುಕ 225 ಎಂಎಸ್ಎ 2006, ದಿನಾಂಕ: 06.11.2006
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 225 ಎಂಎಸ್ಎ 2006, ದಿನಾಂಕ: 22.05.2009
3) ಸರ್ಕಾರದ ಆದೇಶ ಸಂಖ್ಯೆ: ಆಕುಕ 225 ಎಂಎಸ್ಎ 2006, ದಿನಾಂಕ: 11.02.2010
4) ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ: ಆಕುಕ 336 ಎಂಎಸ್ಎ 2009, ದಿನಾಂಕ: 31.05.2010
5) ಡಾ॥ ಕಿಶೋರ್ ಮೆಂಗಾಜಿ ಇವರ ರಕ್ಷಣಾ ಹೇಳಿಕೆ ದಿನಾಂಕ: 21.06.2010
6) ಸರ್ಕಾರದ ಆದೇಶ ಸಂಖ್ಯೆ: ಆಕುಕ 336 ಎಂಎಸ್ಎ 2009, ದಿನಾಂಕ: 06.09.2011
7) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 336 ಎಂಎಸ್ಎ 2009, ದಿನಾಂಕ: 28.12.2011
8) ವಿಚಾರಣಾಧಿಕಾರಿಯವರ ವಿಚಾರಣಾ ವರದಿ ಸಂಖ್ಯೆ: ವಿಆ:ಆಪ್ತ:1:2011–12, ದಿನಾಂಕ: 17.04.2012
9) 2ನೇ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ: ಆಕುಕ 336 ಎಂಎಸ್ಎ 2009, ದಿನಾಂಕ: 06.06.2012
10) 2ನೇ ಕಾರಣ ಕೇಳುವ ಸೂಚನಾ ಪತ್ರಕ್ಕೆ ಡಾ॥ ಕಿಶೋರ್ ಮೆಂಗಾಜಿ ಇವರ ರಕ್ಷಣಾ ಹೇಳಿಕೆ ದಿನಾಂಕ: 30.06.2012.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಡಾ॥ ಕಿಶೋರ್ ಮೆಂಗಾಜಿ, ಹಿರಿಯ ತಜ್ಞರು (ಮೂಳೆ), ಜಿಲ್ಲಾ ಸರ್ಕಾರಿ ಆಸ್ಪತ್ರೆ, ಗುಲ್ಬರ್ಗಾ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಶ್ರೀ ಬಾಬುರಾವ್ ಬಿನ್ ಪರಮೇಶ್ವರ ಕಿಲ್ಲಿ, ಶ್ರೀನಿವಾಸ ಸರಡಗಿ ವಾಸಿ, ಗುಲ್ಬರ್ಗಾ ಇವರ ರಕ್ತ ಸಂಬಂಧಿಕರ ಮನೆಯ ಗೋಡೆ ಕುಸಿದು ಬಲಗಾಲಿಗೆ ಪೆಟ್ಟಾಗಿದ್ದು, ಶಸ್ತ್ರಚಿಕಿತ್ಸೆ ಮಾಡುವ ಸಂಬಂಧ ರೂ.1000/–ಗಳ ಅಕ್ರಮ ಸಂಭಾವನೆಯನ್ನು ಪಡೆಯುತ್ತಿರುವಾಗ ಲೋಕಾಯುಕ್ತರ ಬಲೆಗೆ ಸಿಲುಕಿರುವ ಹಿನ್ನೆಲೆಯಲ್ಲಿ ಸದರಿಯವರನ್ನು ಶಿಸ್ತುಕ್ರಮ/ಕ್ರಿಮಿನಲ್ ಮೊಕದ್ದಮೆ ಬಾಕಿ ಇರಿಸಿ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಸರ್ಕಾರದ ಅಧಿಸೂಚನೆಯಲ್ಲಿ ಸದರಿ ವೈದ್ಯಾಧಿಕಾರಿಯವರ ವಿರುದ್ಧದ ಶಿಸ್ತು ಕ್ರಮ / ಕ್ರಿಮಿನಲ್ ಮೊಕದ್ದಮೆ ಬಾಕಿ ಇರಿಸಿ ಇವರ ಅಮಾನತ್ತನ್ನು ತೆರವುಗೊಳಿಸಿ ಸಾರ್ವಜನಿಕ ಆಸ್ಪತ್ರೆ, ಔರಾದ್, ಬೀದರ್ ಜಿಲ್ಲೆ ಇಲ್ಲಿ ಖಾಲಿ ಇರುವ ಸ್ಥಳಕ್ಕೆ ವರ್ಗಾಯಿಸಿ ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿನ ಸರ್ಕಾರದ ಆದೇಶದಲ್ಲಿ ಡಾ॥ ಕಿಶೋರ್ ಮೆಂಗಾಜಿ ಇವರು ನೇಮಕಾತಿ ಮಾಡಿದ ಸ್ಥಳದಲ್ಲಿ ಕಾರ್ಯವರದಿ ಮಾಡಿಕೊಳ್ಳದೇ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯಾಗಿರುವುದರಿಂದ ಸದರಿಯವರ ವಿರುದ್ಧದ ಶಿಸ್ತು ಕ್ರಮ ಬಾಕಿ ಇರಿಸಿ ಪುನ: ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿ ಸರ್ಕಾರದ ಪತ್ರದ ರೀತ್ಯ ಸದರಿಯವರ ಅನಧಿಕೃತ ಗೈರು ಹಾಜರಿಗೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11ರಡಿಯಲ್ಲಿ ಕಾರಣ ಕೇಳುವ ಸೂಚನಾ ಪತ್ರವನ್ನು ನೀಡಿ ಅವರಿಂದ ಸದರಿ ವೈದ್ಯಾಧಿಕಾರಿಯವರ ವಿವರಣೆಯನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರಲ್ಲಿನ ಮನವಿ ದಿನಾಂಕ: 21.06.2010ರಲ್ಲಿ ಡಾ॥ ಕಿಶೋರ್ ಮೆಂಗಾಜಿ ಇವರು ತಮ್ಮ ವಿವರಣೆಯನ್ನು ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪವನ್ನು ಅಲ್ಲಗಳೆದು ತಮ್ಮನ್ನು ದೋಷಮುಕ್ತಗೊಳಿಸುವಂತೆ ಕೋರಿದ್ದರು.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರಲ್ಲಿ ಸರ್ಕಾರದ ಆದೇಶದ ರೀತ್ಯ ಡಾ॥ ಕಿಶೋರ್ ಮೆಂಗಾಜಿ, ಹಿರಿಯ ತಜ್ಞರು ಇವರು ಅನಧಿಕೃತ ಗೈರು ಹಾಜರಿ ಮತ್ತು ಬೇರೆ ಕಡೆ ಸ್ಥಳನಿಯುಕ್ತಿಗೊಳಿಸುವ ಬಗ್ಗೆ ರಾಜಕೀಯ ಒತ್ತಡ ತಂದಿದ್ದುದರ ಹಿನ್ನೆಲೆಯಲ್ಲಿ ಮತ್ತು ಅವರ ರಕ್ಷಣಾ ಹೇಳಿಕೆಗಳು ತೃಪ್ತಿಕರವಾಗಿಲ್ಲದಿದ್ದುದರಿಂದ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾ ಪ್ರಾಧಿಕಾರಿಯನ್ನಾಗಿ ನೇಮಕ ಮಾಡಿ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 11ರಡಿ ಇಲಾಖಾ ವಿಚಾರಣೆ ನಡೆಸಲು ವಹಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (7)ರಲ್ಲಿನ ಸರ್ಕಾರದ ಅಧಿಸೂಚನೆಯಲ್ಲಿ ಸದರಿ ವೈದ್ಯಾಧಿಕಾರಿಯವರ ಅಮಾನತ್ತನ್ನು ತೆರವುಗೊಳಿಸಿ ಸಾರ್ವಜನಿಕ ಆಸ್ಪತ್ರೆ, ಸೇಡಂ, ಗುಲ್ಬರ್ಗಾ ಜಿಲ್ಲೆ ಇಲ್ಲಿ ಖಾಲಿ ಇರುವ ಹಿರಿಯ ತಜ್ಞರ ಹುದ್ದೆಗೆ ಪುನರ್ ನೇಮಕ ಮಾಡಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (8)ರಲ್ಲಿ ವಿಚಾರಣಾಧಿಕಾರಿಯವರು ಡಾ॥ ಕಿಶೋರ್ ಮೆಂಗಾಜಿ ಇವರ ಮೇಲಿನ ಅನಧಿಕೃತ ಗೈರು ಹಾಜರಿಗೆ ಸಂಬಂಧಿಸಿದಂತೆ ವಿಚಾರಣೆಯನ್ನು ನಡೆಸಿ ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಅದರಲ್ಲಿ ಆರೋಪಿತ ಅಧಿಕಾರಿಯು ಕೇವಲ ಸ್ವಲ್ಪ ಅವಧಿಗೆ ಮಾತ್ರ ರಜಾ ಅರ್ಜಿಗಳನ್ನು ಹಾಗೂ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಸಲ್ಲಿಸಿ ಮುಂದಿನ ಅವಧಿಗೆ ಯಾವುದೇ ಕ್ರಮ ಕೈಗೊಂಡಿರುವುದಿಲ್ಲವೆನ್ನುವುದು ಸಹ ಕಂಡು ಬರುತ್ತದೆಯೆಂದು ವರದಿ ಮಾಡಿದ್ದಾರೆ. ಆದುದರಿಂದ ಆರೋಪಿತ ಅಧಿಕಾರಿಯು ತಮ್ಮ ಕರ್ತವ್ಯವನ್ನು ಸಂಪೂರ್ಣವಾಗಿ ಮಾಡದೆ ಕೇವಲ ಅಲ್ಪ ಪ್ರಮಾಣದಲ್ಲಿ ಮಾಡಿ ಮುಂದಿನ ಅವಧಿಗೆ ಯಾವುದೇ ಕ್ರಮ ಕೈಗೊಂಡಿರುವುದು ಕಂಡು ಬರುವುದಿಲ್ಲವೆಂದು ವರದಿ ಮಾಡುತ್ತಾ, ವಿವಾದಾಂಶ 1ನ್ನು ಭಾಗಶ: ಸಕಾರಾತ್ಮಕವಾಗಿ ಹಾಗೂ ಭಾಗಶ: ನಕಾರಾತ್ಮಕವಾಗಿ ಉತ್ತರಿಸುತ್ತೇನೆಂದು ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (9)ರಲ್ಲಿನ ಸರ್ಕಾರದ ಪತ್ರದಲ್ಲಿ ಡಾ॥ ಕಿಶೋರ್ ಮೆಂಗಾಜಿ ಇವರ ಮೇಲಿನ ಆರೋಪವು ಭಾಗಶ: ಸಾಬೀತಾಗಿರುವುದರಿಂದ ಸದರಿಯವರಿಗೆ 2ನೇ ಕಾರಣ ಕೇಳುವ ಸೂಚನಾ ಪತ್ರವನ್ನು ನೀಡಿ ಅವರ ಸಮಜಾಯಿಷಿಯನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (10)ರಲ್ಲಿ ಡಾ॥ ಕಿಶೋರ್ ಮೆಂಗಾಜಿ ಇವರು ವಿವರಣೆಯನ್ನು ಸಲ್ಲಿಸಿ ಮೆಡಿಕಲ್ ಫಿಟ್‌ನೆಸ್ ಪ್ರಮಾಣ ಪತ್ರವನ್ನು ವೈದ್ಯರು ನೀಡಿಲ್ಲದ ಪ್ರಯುಕ್ತ ಇದುವರೆವಿಗೂ ಕರ್ತವ್ಯಕ್ಕೆ ಹಾಜರಾಗಲು ಸಾದ್ಯವಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಲಭ್ಯವಿರುವ ದಾಖಲೆಗಳೊಂದಿಗೆ ಪರಿಶೀಲಿಸಲಾಗಿ ಆಪಾದಿತ ಅಧಿಕಾರಿಯವರು ಅಮಾನತ್ತನ್ನು ತೆರವುಗೊಳಿಸಿ ಕರ್ತವ್ಯಕ್ಕೆ ಪುನರ್ ನೇಮಕ ಮಾಡಿ ಆದೇಶಿಸಿದ ನಂತರವೂ ಕರ್ತವ್ಯಕ್ಕೆ ಹಾಜರಾಗದೆ ಮತ್ತು ರಜಾ ಅರ್ಜಿಯನ್ನು ಸಲ್ಲಿಸದೇ ಅನಧಿಕೃತ ಗೈರುಹಾಜರಾಗಿ ಮೆಡಿಕಲ್ ಫಿಟ್‌ನೆಸ್ ಪ್ರಮಾಣ ಪತ್ರವನ್ನು ವೈದ್ಯರು ನೀಡಿಲ್ಲವೆಂದು ಕಾರಣವನ್ನು ನೀಡಿರುವುದು ಸರಿಯಾದ ಕ್ರಮವಾಗಿರುವುದಿಲ್ಲ. ವೈದ್ಯಾಧಿಕಾರಿಯವರು ಉದ್ದೇಶಪೂರ್ವಕವಾಗಿ ಅನಧಿಕೃತ ಗೈರುಹಾಜರಾಗಿ ಉಳಿದಿರುವುದು ಕಂಡುಬರುತ್ತದೆ.

ಇಂತಹ ಪ್ರಕರಣಗಳಲ್ಲಿ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಮಹಮ್ಮದ್ ಕೆ. ವಿರುದ್ದ ರಾಜ್ಯ ಮತ್ತು ಇತರರು, ಈ ಪ್ರಕರಣದಲ್ಲಿ (1996) ಕೆ.ಎಸ್.ಎಲ್.ಜೆ/1016 ಅರ್ಜಿ ಸಂಖ್ಯೆ:3351/94 ರಲ್ಲಿ ದಿನಾಂಕ: 11-9-96 ರಂದು ನೀಡಿರುವ ತೀರ್ಪಿನ ಉದ್ಧೃತ ಭಾಗವು ಈ ಕೆಳಕಂಡಂತಿದೆ;

> "We are of the view that the relationship between the Government employee and the State involves mutual rights and obligations. The Rights cannot vest in the Government Employee without a corresponding obligation to attend to the duties the service under the State Government is not open house for anybody to walk in and getout as he pleases."

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 108ರ ಅನುಸಾರ ಯಾವುದೇ ಸರ್ಕಾರಿ ನೌಕರರು ಕರ್ತವ್ಯಕ್ಕೆ 4 ತಿಂಗಳಿಗಿಂತ ಮೇಲ್ಪಟ್ಟು ಅನಧಿಕೃತ ಗೈರುಹಾಜರಿಯಾದಲ್ಲಿ ಅಂತಹ ನೌಕರರನ್ನು ವಿಚಾರಣೆಗೆ ಒಳಪಡಿಸಿ, ಅನಧಿಕೃತ ಗೈರುಹಾಜರಿಯು ಸಾಬೀತಾದಲ್ಲಿ ಅಂತಹ ನೌಕರರನ್ನು ಸೇವೆಯಿಂದ ವಜಾಗೊಳಿಸಲು ಅವಕಾಶ ಕಲ್ಪಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಡಾ: ಕಿಶೋರ್ ಮೆಂಗಾಜಿ, ವೈದ್ಯಾಧಿಕಾರಿ ಇವರ ಅನಧಿಕೃತ ಗೈರುಹಾಜರಿ ಭಾಗಶ: ಸಾಬೀತಾಗಿರುವ ಹಿನ್ನಲೆಯಲ್ಲಿ ಹಾಗೂ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಮಹಮ್ಮದ್ ಕೆ. ವಿರುದ್ದ ರಾಜ್ಯ ಮತ್ತು ಇತರರು ಇವರ ಪ್ರಕರಣದಲ್ಲಿ ನೀಡಿರುವ ತೀರ್ಪಿನ ಹಿನ್ನಲೆಯಲ್ಲಿ ಸದರಿಯವರನ್ನು ಸೇವೆಯಿಂದ ವಜಾಗೊಳಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 336 ಎಂಎಸ್ಎ 2009, ಬೆಂಗಳೂರು, ದಿನಾಂಕ: 23ನೇ ಜುಲೈ, 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಡಾ॥ ಕಿಶೋರ್ ಮೆಂಗಾಜಿ, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಸೇಡಂ, ಗುಲ್ಬರ್ಗಾ ಜಿಲ್ಲೆ ಇವರ ಅನಧಿಕೃತ ಗೈರು ಹಾಜರಿ ಆರೋಪವು ಸಾಬೀತಾಗಿರುವ ಹಿನ್ನಲೆಯಲ್ಲಿ ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 8(viii)ರನ್ವಯ ಸರ್ಕಾರಿ ಸೇವೆಯಿಂದ ವಜಾ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಎಫ್. ಹುಬ್ಬಳ್ಳಿ,**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಪಿ.ಆರ್. 1949**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

ವಿಷಯ : ಡಾ॥ ಶೇಕ್ ಮುಸ್ತಾಕ್ ಮೊಹಮ್ಮದ್, ವೈದ್ಯರು ದರ್ಜೆ–2(ಯು), ಸರ್ಕಾರಿ ಯುನಾನಿ ಚಿಕಿತ್ಸಾಲಯ, ನಾಗಮಂಗಲ, ಮಂಡ್ಯ ಜಿಲ್ಲೆ ರವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

ಓದಲಾಗಿದೆ : ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಆಯುಷ್/9/ಸಿ(4)/2010–11,ದಿನಾಂಕ:29–05–2012.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಆಯುಷ್ ನಿರ್ದೇಶಕರು, ಡಾ॥ ಶೇಕ್ ಮುಸ್ತಾಕ್ ಮೊಹಮ್ಮದ್, ವೈದ್ಯರು ದರ್ಜೆ–2(ಯು), ಸರ್ಕಾರಿ ಯುನಾನಿ ಚಿಕಿತ್ಸಾಲಯ, ನಾಗಮಂಗಲ, ಮಂಡ್ಯ ಜಿಲ್ಲೆ ಇವರು ದಿ: 27.10.86ರಂದು ವೈ. ದರ್ಜೆ–2 ಹುದ್ದೆಗೆ ಸರ್ಕಾರಿ ಯುನಾನಿ ಚಿಕಿತ್ಸಾಲಯ, ರಾಮದುರ್ಗ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು, ತದನಂತರದಲ್ಲಿ ಸರ್ಕಾರಿ ಯುನಾನಿ ಚಿಕಿತ್ಸಾಲಯ, ನಾಗಮಂಗಲ, ಮಂಡ್ಯ ಜಿಲ್ಲೆ ಇಲ್ಲಿಗೆ ವರ್ಗಾವಣೆಗೊಂಡು ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿ:16.12.96 ರಿಂದ 30.03.1997 ರವರೆಗೆ ರಜೆ ಅರ್ಜಿ ಸಲ್ಲಿಸಿ, ಸಕ್ಷಮ ಪ್ರಾಧಿಕಾರದಿಂದ ರಜೆ ಮಂಜೂರು ಮಾಡಿಸಿಕೊಳ್ಳದೆ ಹಾಗೂ ಕಾರ್ಯಭಾರವನ್ನು ಯಾರಿಗೂ ವಹಿಸದೇ ಇಲ್ಲಿಯವರೆಗೂ ಅಂದರೆ ಸುಮಾರು 14 ವರ್ಷಗಳ ಕಾಲ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತಾರೆಂದು, ತತ್ಸಂಬಂಧವಾಗಿ ಸದರಿಯವರಿಗೆ ಕರ್ನಾಟಕ ನಾಗರಿಕ ಸೇವಾ (ಸಿಸಿಎ) ನಿಯಮಗಳನ್ವಯ ಜಾರಿ ಮಾಡಲಾದ ದೋಷಾರೋಪಣೆ ಪಟ್ಟಿಗೆ ಸದರಿಯವರು ರಕ್ಷಣಾ ಹೇಳಿಕೆಯನ್ನು ಸಲ್ಲಿಸಿ ಆರೋಪವನ್ನು ಅಲ್ಲಗೆಳೆದಿರುತ್ತಾರೆಂದು ಮುಂದುವರೆದು, ಸದರಿ ವೈದ್ಯರ ಅನಧಿಕೃತ ಗೈರು ಹಾಜರಾತಿಯ ಕರ್ತವ್ಯ ಲೋಪದ ವಿರುದ್ದ ತನಿಖೆ ಮಾಡಲು ನೇಮಿಸಿದ ವಿಚಾರಣಾಧಿಕಾರಿಗಳು, ಸದರಿ ವೈದ್ಯರು 14 ವರ್ಷಗಳಷ್ಟು ಸುದೀರ್ಘ ಅನಧಿಕೃತ ಗೈರುಹಾಜರಾಗಿ ಕರ್ತವ್ಯ ಲೋಪವೆಸಗಿ ನಿಯಮಗಳನ್ನು ಸ್ಪಷ್ಟವಾಗಿ ಉಲ್ಲಂಘಿಸಿರುವ ಬಗ್ಗೆ ವರದಿ ಸಲ್ಲಿಸಿರುತ್ತಾರೆಂದು ತಿಳಿಸಿರುತ್ತಾರೆ.

ವಿಚಾರಣಾ ವರದಿಯ ಆಧಾರದ ಮೇಲೆ ಆಪಾದಿತ ನೌಕರರಿಗೆ ಜಾರಿಯಾದ ಎರಡನೇ ಕಾರಣ ಕೇಳುವ ನೋಟೀಸ್‌ಗೆ ಲಿಖಿತ ಹೇಳಿಕೆ ಸಲ್ಲಿಸಿರುವ ಆಪಾದಿತ ವೈದ್ಯರು ಕರ್ತವ್ಯಕ್ಕೆ ಗೈರುಹಾಜರಾಗಿರುವುದನ್ನು ಒಪ್ಪಿಕೊಂಡಿದ್ದು, ಸ್ವತಃ ತಮ್ಮ ಹಾಗೂ ತಮ್ಮ ಪತ್ನಿಯ ಅನಾರೋಗ್ಯದ ಕಾರಣವಾಗಿ ಕರ್ತವ್ಯಕ್ಕೆ ಗೈರುಹಾಜರಾಗಿರುವುದಾಗಿ ತಿಳಿಸುತ್ತಾ, ಅನಧಿಕೃತ ಗೈರುಹಾಜರಿಗಾಗಿ ಲಘು ದಂಡನೆಯನ್ನು ವಿಧಿಸಿ ಇಲಾಖೆಯಲ್ಲಿ ಮುಂದುವರೆಯಲು ಅವಕಾಶ ಮಾಡಿಕೊಡುವಂತೆ ಮನವಿ ಮಾಡಿಕೊಂಡಿರುತ್ತಾರೆಂದು ತಿಳಿಸುತ್ತಾ, ಡಾ॥ ಶೇಕ್ ಮುಸ್ತಾಕ್ ಮೊಹಮ್ಮದ್, ವೈದ್ಯರು ದರ್ಜೆ–2(ಯು) ರವರು ಕಾರ್ಯಭಾರವನ್ನು ವಹಿಸದೇ 1997ರಿಂದ ಇಲ್ಲಿಯವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯ ಲೋಪವೆಸಗಿ ನಿಯಮಗಳನ್ನು ಸ್ಪಷ್ಟವಾಗಿ ಉಲ್ಲಂಘಿಸಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರಿಕ ಸೇವಾ (ಸಿಸಿಎ) ನಿಯಮ 1957 ನಿಯಮ 8 (viii) ರನ್ವಯ ಸೇವೆಯಿಂದ ವಜಾಗೊಳಿಸುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 322 ಪಿಐಎಂ 2012, ಬೆಂಗಳೂರು, ದಿನಾಂಕ:12.07.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ॥ ಶೇಕ್ ಮುಸ್ತಾಕ್ ಮೊಹಮ್ಮದ್, ವೈದ್ಯರು ದರ್ಜೆ–2(ಯು), ಸರ್ಕಾರಿ ಯುನಾನಿ ಚಿಕಿತ್ಸಾಲಯ, ನಾಗಮಂಗಲ, ಮಂಡ್ಯ ಜಿಲ್ಲೆ ಇವರು ದಿನಾಂಕ:16.12.1996ರಿಂದ ಕಾರ್ಯಭಾರವನ್ನು ವಹಿಸದೇ ಇಲ್ಲಿಯವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯ ಲೋಪವೆಸಗಿ ನಿಯಮಗಳನ್ನು ಸ್ಪಷ್ಟವಾಗಿ ಉಲ್ಲಂಘಿಸಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರಿಕ ಸೇವಾ (ಸಿಸಿಎ) ನಿಯಮ 1957 ನಿಯಮ 8 (viii) ರನ್ವಯ ಸೇವೆಯಿಂದ ವಜಾಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎನ್. ಹರಿಣಿಯಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ಪಿ.ಆರ್. 1950**

## ಸಹಕಾರ ಸಚಿವಾಲಯ

**ವಿಷಯ** : ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ಕಾರ್ಯ ನಿರ್ವಹಣೆಯನ್ನು ಸಹಕಾರ ಇಲಾಖೆಯಿಂದ ಕಂದಾಯ ಇಲಾಖೆಗೆ ವರ್ಗಾಯಿಸುವ ಬಗ್ಗೆ – ಆದೇಶ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ:ಕಂಇ 152 ಮುನೋಮು 2008, ದಿನಾಂಕ 7–5–2008.
2. ಅಧಿಸೂಚನೆ ಸಂಖ್ಯೆ:ಸಿಓ 50 ಪಿಎಂಸಿ 2008, ದಿನಾಂಕ 27–5–2008 ಹಾಗೂ ಇದೇ ಸಮಸಂಖ್ಯೆಯ ತಿದ್ದುಪಡಿ ದಿನಾಂಕ 1–7–2008.
3. ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಆರ್‌ಸಿಎಸ್/ಎಡಿಎಂ/33/ಎಸ್‌ಓಆರ್–1/2011–12, ದಿನಾಂಕ 8–5–2012.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಾರ್ಯನಿರ್ವಹಣೆಯನ್ನು ಕಂದಾಯ ಇಲಾಖೆಯಿಂದ ಸಹಕಾರ ಇಲಾಖೆಗೆ ವರ್ಗಾಯಿಸಿದೆ.

ಮೇಲೆ (2)ರಲ್ಲಿ ಓದಲಾದ ಅಧಿಸೂಚನೆಗಳ ಪೈಕಿ ದಿನಾಂಕ 27–5–2008ರ ಅಧಿಸೂಚನೆಯಲ್ಲಿ ಒಟ್ಟು 29 ಜಿಲ್ಲೆಗಳಿಗೆ ಅನ್ವಯವಾಗುವಂತೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಾರ್ಯನಿರ್ವಹಣೆಯನ್ನು ಜಿಲ್ಲಾವಾರು ಹಂಚಿ ಜಿಲ್ಲೆಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಸಹಕಾರ ಸಂಘಗಳ ಉಪ ನಿಬಂಧಕರುಗಳಿಗೆ ಅನ್ವಯವಾಗುವಂತೆ ಅಧಿಕಾರವನ್ನು ಪ್ರತ್ಯಾಯೋಜಿಸಿ ಅಧಿಸೂಚನೆ ಹೊರಡಿಸಿದೆ. ದಿನಾಂಕ 1–7–2008 ರಂದು ಈ ಆದೇಶಕ್ಕೆ ತಿದ್ದುಪಡಿ ಮಾಡಿ ಸದರಿ ಅಧಿಸೂಚನೆ ದಿನಾಂಕ 27–5–2008 ರಲ್ಲಿ **"ಬಾಗಲಕೋಟೆ ಗ್ರಾಮಾಂತರ"** ಎಂಬುದಕ್ಕೆ ಬದಲಾಗಿ **"ಬಾಗಲಕೋಟೆ ಜಿಲ್ಲೆ"** ಎಂದು ಓದಿಕೊಳ್ಳತಕ್ಕದ್ದು ಎಂದು ಸ್ಪಷ್ಟಪಡಿಸಿದೆ.

ಮೇಲೆ (3)ರಲ್ಲಿ ಓದಲಾದ ಸಹಕಾರ ಸಂಘಗಳ ನಿಬಂಧಕರು ಈ ಕುರಿತಂತೆ ವಿವರವಾದ ವರದಿಯನ್ನು ಸಲ್ಲಿಸಿದ್ದಾರೆ. ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಾರ್ಯ ನಿರ್ವಹಣೆಯನ್ನು 1–6–2008 ರಿಂದ ಜಾರಿಗೆ ಬರುವಂತೆ ಕಂದಾಯ ಇಲಾಖೆಯಿಂದ ಸಹಕಾರ ಇಲಾಖೆಗೆ ವರ್ಗಾಯಿಸಲಾಗಿದೆ. ಸಹಕಾರ ಇಲಾಖೆಯಲ್ಲಿ ಸುಮಾರು 35,502 ವಿವಿಧ ರೀತಿಯ ಸಹಕಾರ ಸಂಘಗಳು ಕಾರ್ಯನಿರ್ವಹಿಸುತ್ತಿದ್ದು, ಈ ಸಂಘಗಳ ಕಾರ್ಯನಿರ್ವಹಣೆಯ ಜೊತೆಗೆ ಸುಮಾರು 2,51,000 ವಿವಿಧ ಪ್ರಕಾರದ ಸಂಘ ಸಂಸ್ಥೆಗಳ ಕಾರ್ಯವನ್ನು ಪ್ರಸ್ತುತ ಇಲಾಖೆಗೆ ಮಂಜೂರಾಗಿರುವ ಸಿಬ್ಬಂದಿ ವರ್ಗದವರಿಂದಲೇ ನಿರ್ವಹಿಸುತ್ತಿರುವುದು ಕಷ್ಟ ಸಾಧ್ಯವಾಗಿದೆ. ಅಲ್ಲದೇ ಪ್ರತಿ ಜಿಲ್ಲೆಯಲ್ಲೂ ಕನಿಷ್ಟ ಪಕ್ಷ 10 ಸಾವಿರಕ್ಕೂ ಹೆಚ್ಚು ಸಂಘಗಳು ನೋಂದಣಿಯಾಗಿದ್ದು ಇವರುಗಳ ನವೀಕರಣ, ಉಸ್ತುವಾರಿ, ದೂರು ಅರ್ಜಿ ವಿಚಾರಣೆ ಹಾಗೂ ಶಾಸನಬದ್ಧ ವಿಚಾರಣೆಯನ್ನು ಕೈಗೊಳ್ಳಲು ತೀವ್ರ ತೊಂದರೆ ಉಂಟಾಗಿರುವುದರಿಂದ ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ 1960ರ ಅನುಷ್ಠಾನವನ್ನು ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ ಹಿಂತಿರುಗಿಸುವುದಕ್ಕೆ ಶಿಫಾರಸ್ಸು ಮಾಡಿದ್ದಾರೆ. ಇದಲ್ಲದೇ ಸಹಕಾರ ಇಲಾಖೆಯಲ್ಲಿ ಈ ಕೆಳಕಂಡಂತೆ ಅಧಿನಿಯಮ ಮತ್ತು ನಿಯಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1. ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಾವಳಿಗಳು 1960 (ಇದರ ಅಡಿಯಲ್ಲಿ ದಿನಾಂಕ 31–3–2011ಕ್ಕೆ ಇದ್ದಂತೆ 35,502 ಸಂಘಗಳು ಇರುತ್ತದೆ).
2. ಕರ್ನಾಟಕ ಲೇವಾದೇವಿಗಾರರ ಅಧಿನಿಯಮ 1961 ಮತ್ತು ಕರ್ನಾಟಕ ಲೇವಾದೇವಿ ನಿಯಮಗಳು 1965 (ಇದರ ಅಡಿ ದಿನಾಂಕ 31–3–2012ಕ್ಕೆ 2,829 ಸಂಘಗಳು ಇರುತ್ತದೆ).
3. ಕರ್ನಾಟಕ ಗಿರವಿದಾರರ ಅಧಿನಿಯಮ 1961 ಮತ್ತು ನಿಯಮಗಳು 1966 (ಇದರ ಅಡಿ 31–3–2012ಕ್ಕೆ 6,535 ಸಂಘಗಳು ಇರುತ್ತದೆ).
4. 1982ರ ಚೀಟಿನಿಧಿಗಳ ಅಧಿನಿಯಮ ಮತ್ತು ಚೀಟಿನಿಧಿಗಳ (ಕರ್ನಾಟಕ) ನಿಯಮಾವಳಿ 1983 (ಇದರ ಅಡಿಯಲ್ಲಿ ದಿನಾಂಕ 31–3–2012ಕ್ಕೆ 637 ಸಂಘಗಳು ಇರುತ್ತದೆ)
5. ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ 1997 ಮತ್ತು ಕರ್ನಾಟಕ ಸೌಹಾರ್ದ ಸಹಕಾರ ನಿಯಮಗಳು 2004 (ಇದರ ಅಡಿಯಲ್ಲಿ ದಿನಾಂಕ: 31–3–2012ಕ್ಕೆ 2,020 ಸಂಘಗಳು ಇರುತ್ತದೆ).
6. ಕರ್ನಾಟಕ ಮಿತಿಮೀರಿದ ಬಡ್ಡಿ ವಿಧಿಸುವಿಕೆಯ ನಿಷೇದ ಅಧಿನಿಯಮ 2004.
7. ಕರ್ನಾಟಕ ಋಣ ಪರಿಹಾರ ಅಧಿನಿಯಮ 1980.
8. ಕರ್ನಾಟಕ ಪಬ್ಲಿಕ್ ಮನಿ (Recovery of dues) ಅಧಿನಿಯಮ 1980.
9. ಕರ್ನಾಟಕ ಅಗ್ರಿಕಲ್ಚರಲ್ ಕ್ರೆಡಿಟ್ ಆಪರೇಷನ್ಸ್ ಮತ್ತು ಮಿಸಲೇನಿಯಸ್ ಪ್ರೊವಿಷನ್ಸ್ ಕಾಯ್ದೆ 1974.

ಮೇಲೆ ನಮೂದಿಸಿದ ಕಾಯ್ದೆ ಮತ್ತು ನಿಯಮದಡಿಯಲ್ಲಿ ಈಗಾಗಲೇ ಸಾವಿರಾರು ಸಂಸ್ಥೆಗಳ ಮೇಲ್ವಿಚಾರಣೆಯನ್ನು ಸಹಕಾರ ಸಂಘಗಳ ಉಪ ನಿಬಂಧಕರು ನಿರ್ವಹಿಸುತ್ತಿದ್ದು ಇದರೊಂದಿಗೆ ಒಟ್ಟು 2,51,000 ಸಂಘಗಳ ನೋಂದಣಿ, ವಾರ್ಷಿಕ ನವೀಕರಣ, ಉಸ್ತುವಾರಿ, ದೂರು ಅರ್ಜಿ ವಿಚಾರಣೆ, ನ್ಯಾಯಾಲಯದ ಪ್ರಕರಣಗಳು ಮತ್ತು ಶಾಸನಬದ್ಧ ವಿಚಾರಣೆ ಅನುಷ್ಠಾನ ಇತ್ಯಾದಿಗಳ ಕುರಿತಂತೆ ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ 1960 ರಡಿಯಲ್ಲಿ ಕಾರ್ಯನಿರ್ವಹಿಸುವುದು ಕಷ್ಟಸಾಧ್ಯವಾಗಿದೆ ಮತ್ತು ವಾಸ್ತವವಾಗಿ ಸಹಕಾರ ಇಲಾಖೆಯು ಬಹಳಷ್ಟು ತೊಂದರೆಯನ್ನು ಅನುಭವಿಸುತ್ತಿರುವುದರಿಂದ ದಿನ ನಿತ್ಯದ ಕಾರ್ಯಗಳಿಗೆ ಅಡಚಣೆ ಉಂಟಾಗಿರುವುದರಿಂದ ಈ ಕಾಯ್ದೆಯನ್ನು ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ ಹಿಂತಿರುಗಿಸುವುದು ಸೂಕ್ತವೆಂದು ಅಭಿಪ್ರಾಯ ಸೂಚಿಸಿ ಶಿಫಾರಸ್ಸು ಮಾಡಿದ್ದಾರೆ. ಇದರಿಂದಾಗಿ ಅನೇಕ ಬಾರಿ ಇಲಾಖೆಯ ಪ್ರಗತಿ ಪರಿಶೀಲನಾ ಸಭೆಯಲ್ಲಿ ಅತ್ಯಂತ ಪ್ರಮುಖವಾದ ಮತ್ತು ಪ್ರಧಾನವಾದ ಕೆಲಸ ಕಾರ್ಯಗಳನ್ನು ನಿರ್ವಹಿಸಲು ತೊಂದರೆಯಾಗಿದೆಯೆಂದು ಇಲಾಖಾ ಮುಖ್ಯಸ್ಥರು ಅಭಿಪ್ರಾಯ ಸೂಚಿಸಿದ್ದಾರೆ ಹಾಗೂ ಅನೇಕ ಪ್ರಸಂಗಗಳಲ್ಲಿ ಕಾನೂನು ಪಾಲನೆಯ ಸಮಸ್ಯೆಗಳು ಕೂಡ ಪದೇಪದೇ ಉದ್ಭವಿಸುತ್ತಿರುವುದರಿಂದ ಸಹಕಾರ ಇಲಾಖೆಯಲ್ಲಿ ಸಂಘ ಸಂಸ್ಥೆಗಳ ನೋಂದಣಿ ಕಾರ್ಯವನ್ನು ನಿಭಾಯಿಸುವುದು ಕಷ್ಟಸಾಧ್ಯವಾಗಿದೆ. ಮೇಲಾಗಿ ಸಂಘ ಸಂಸ್ಥೆಗಳಲ್ಲಿನ ಸದಸ್ಯರ ಸಂಖ್ಯೆ ಮತ್ತು ಬಂಡವಾಳ ಮೊತ್ತವು ಏರಿಕೆಯಾಗುತ್ತಿದ್ದು ಸಂಘಗಳ ರಚನೆ ಮತ್ತು ಕಾರ್ಯನಿರ್ವಹಣೆ ಹಾಗೂ ಹಣಕಾಸಿನ ವಿಷಯದಲ್ಲಿ ಸದಸ್ಯರ ನಡುವೆ ತಲೆದೊರುತ್ತಿರುವ ಭಿನ್ನಾಭಿಪ್ರಾಯದ ದುರಾಡಳಿತ ಅವ್ಯವಹಾರಗಳಿಂದ ವ್ಯಾಜ್ಯಗಳು ಉಂಟಾಗುತ್ತಿವೆ. ಇದರಿಂದಾಗಿ ಸಂವಿಧಾನದ ಅಡಿಯಲ್ಲಿ ಅನೇಕ ಸಂಘ ಸಂಸ್ಥೆಗಳ ಮುಖ್ಯಸ್ಥರು ಯಾವುದೇ ಒಂದು ಪ್ರಕ್ರಿಯೆಯನ್ನು ಕಾನೂನು ಅಡಿಯಲ್ಲಿ ಇಲಾಖೆಯು ಮಾಡುತ್ತಿರುವ ಕೆಲಸ ಕಾರ್ಯಗಳಲ್ಲಿ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿ ಅಡೆತಡೆ ಮಾಡುತ್ತಿರುವುದರಿಂದ ಸಹಕಾರ ಇಲಾಖೆಯ ಅಧಿಕಾರಿ/ಸಿಬ್ಬಂದಿ ವರ್ಗದವರು ಹೆಚ್ಚುವರಿ ಸಮಯವನ್ನು ನ್ಯಾಯಾಲಯದಲ್ಲಿ ಕಳೆಯುವಂತಾಗಿದೆ ಹಾಗೂ ಇಲಾಖೆಯ ಅತೀ ಪ್ರಮುಖವಾದ ಕೆಲಸಗಳು ಕುಂಟಿತವಾಗುತ್ತಿವೆಯೆಂದು ಸಹಕಾರ ಸಂಘಗಳ ನಿಬಂಧಕರು ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ. ಪ್ರಸ್ತುತ ಇರುವ ತೊಂದರೆಯನ್ನು ಹಾಗೂ ಸಹಕಾರ ಸಂಘಗಳ ಇಲಾಖೆಯು ಎದುರಿಸುತ್ತಿರುವ ಅನೇಕ ಸಮಸ್ಯೆಗಳನ್ನು ಈ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳೊಂದಿಗೆ ಅನೇಕ ಬಾರಿ ಚರ್ಚಿಸಿ ಒಂದು ತೀರ್ಮಾನಕ್ಕೆ ಬಂದು ಅಂತಿಮವಾಗಿ ದಿನಾಂಕ 9–5–2012 ರಂದು ಇಲಾಖೆಯ ಪ್ರಗತಿ ಪರಿಶೀಲನಾ ಸಭೆಯಲ್ಲಿ ಸಹಕಾರ ಸಂಘಗಳ ನಿಬಂಧಕರು ಹಾಗೂ ಪ್ರಧಾನ ಕಾರ್ಯದರ್ಶಿಗಳು ಮಾನ್ಯ ಮುಖ್ಯಮಂತ್ರಿಯವರೊಂದಿಗೆ ಸುಧೀರ್ಘವಾಗಿ ಚರ್ಚಿಸಿದರು ಹಾಗೂ ಈ ಚರ್ಚೆಯ ಫಲಶ್ರುತಿಯಾಗಿ ಮಾನ್ಯ ಮುಖ್ಯಮಂತ್ರಿಯವರು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರಡಿಯಲ್ಲಿನ ಸಂಪೂರ್ಣ ಕಾರ್ಯನಿರ್ವಹಣೆಯನ್ನು ಸಹಕಾರ ಇಲಾಖೆಯಿಂದ ಕಂದಾಯ ಇಲಾಖೆಗೆ ವರ್ಗಾಯಿಸುವುದಕ್ಕೆ ಸಮ್ಮತಿ ನೀಡಿದ್ದಾರೆ. ಕಂದಾಯ ಇಲಾಖೆ ಮತ್ತು ಸಹಕಾರ ಇಲಾಖೆ ಮಾನ್ಯ ಮುಖ್ಯಮಂತ್ರಿಗಳ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವುದರಿಂದ ಒಂದೇ ಬಾರಿಗೆ ಮಾನ್ಯ ಮುಖ್ಯಮಂತ್ರಿಯವರ ಅನುಮೋದನೆ ಪಡೆಯಲಾಗಿದೆ.

ಕಂದಾಯ ಇಲಾಖೆಯು ಸರ್ಕಾರಿ ಆದೇಶ ಸಂಖ್ಯೆ:ಕಂಇ 152 ಮಾನೋಮು 2008, ದಿನಾಂಕ 7–5–2008 ರನ್ವಯ ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಗಳು 1977 ರನ್ವಯ ಕಂದಾಯ ಇಲಾಖೆಯ ವ್ಯಾಪ್ತಿಯಲ್ಲಿದ್ದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಾರ್ಯನಿರ್ವಹಣೆಯನ್ನು 1–6–2008 ರಿಂದ ಜಾರಿಗೆ ಬರುವಂತೆ ಸಹಕಾರ ಇಲಾಖೆಗೆ ವರ್ಗಾಯಿಸಿದ್ದರೂ ಸಹ ಈ ಆದೇಶದನ್ವಯ ಮೇಲ್ಕಂಡ ನಿಯಮಗಳಿಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ತಿದ್ದುಪಡಿ ಮಾಡಿರುವುದಿಲ್ಲವೆಂಬ ಅಂಶವನ್ನು ಸ್ಪಷ್ಟಪಡಿಸಿದೆ. ಅದರಂತೆ ಈ ಅಂಶವನ್ನು ಸಹ ಮಾನ್ಯ ಮುಖ್ಯಮಂತ್ರಿಯವರ ಅವಗಾಹನೆಗೆ ತರಲಾಗಿದೆ. ಅಲ್ಲದೇ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ:ಸಿಆಸುಇ 126 ಸೇನಿಸಿ 2012, ದಿನಾಂಕ 28–6–2012ರಲ್ಲಿ ಪ್ರಸ್ತುತ ನೋಂದಣಿ ಕಾಯ್ದೆ 1960ರ ಕಾರ್ಯ

ನಿರ್ವಹಣೆಯನ್ನು ಸಹಕಾರ ಇಲಾಖೆಯಿಂದ ಕಂದಾಯ ಇಲಾಖೆಗೆ ತತ್‌ಕ್ಷಣದಿಂದ ಜಾರಿಗೆ ಬರುವಂತೆ ಪುನ: ವರ್ಗಾಯಿಸುವುದಕ್ಕೆ ಸಹಮತಿ ನೀಡಿದೆ ಮತ್ತು ಆದೇಶವನ್ನು ಹೊರಡಿಸುವಂತೆ ಕೋರಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 98 ಸಸಂನೋ 2011, ಬೆಂಗಳೂರು, ದಿನಾಂಕ 5–7–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಾರ್ಯನಿರ್ವಹಣೆಯನ್ನು ಸಹಕಾರ ಇಲಾಖೆಯಿಂದ ಕಂದಾಯ ಇಲಾಖೆಗೆ ತಕ್ಷಣದಿಂದ ಜಾರಿಗೆ ಬರುವಂತೆ ವರ್ಗಾಯಿಸಿ ಆದೇಶಿಸಿದೆ.

ತತ್ಪರಿಣಾಮವಾಗಿ ಮೇಲೆ (2)ರಲ್ಲಿನ ಅಧಿಸೂಚನೆ ದಿನಾಂಕ 27–5–2008 ಹಾಗೂ ತಿದ್ದುಪಡಿ ದಿನಾಂಕ 1–7–2008ನ್ನು ಹಿಂಪಡೆಯಲಾಗಿದೆ.

ಸಂಬಂಧಪಟ್ಟ ಕಡತ ಹಾಗೂ ಸ್ವೀಕೃತಿಗಳನ್ನು ಸದ್ಯದಲ್ಲಿಯೇ ಕಂದಾಯ ಇಲಾಖೆಗೆ ಪಟ್ಟಿ ಮಾಡಿ ವರ್ಗಾಯಿಸಲಾಗುವುದು.

ಈ ಆದೇಶವನ್ನು ಮುಖ್ಯಮಂತ್ರಿಯವರ ಕಛೇರಿಯ ಟಿಪ್ಪಣಿ ಸಂಖ್ಯೆ: ಪಿಎಸ್‌ಸಿಎಂ/ಎಫ್ 3423/2012, ದಿನಾಂಕ 29–5–2012 ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಟಿಪ್ಪಣಿ ಸಂಖ್ಯೆ: 126 ಸೇನಿಸಿ 2012, ದಿನಾಂಕ 28–6–2012ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎಸ್.ವಿಶ್ವೇಶ್ವರಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಪಿ.ಆರ್. 1951**

**ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ**

**ವಿಷಯ** : ಫಲಿತಾಂಶಗಳ ಚೌಕಟ್ಟು ದಾಖಲೆಗಳ (ಆರ್‌ಎಫ್‌ಡಿ) ಅನುಷ್ಠಾನವನ್ನು ಯೋಜನಾ ಇಲಾಖೆಯಿಂದ ಉಸ್ತುವಾರಿ ಮಾಡುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ ಪಿಡಿ 02 ಪಿಎಂಐ 2012, ಬೆಂಗಳೂರು ದಿನಾಂಕ:22ನೇ ಫೆಬ್ರವರಿ 2012

**ಪ್ರಸ್ತಾವನೆ:**

ಫಲಿತಾಂಶಗಳ ಚೌಕಟ್ಟು ದಾಖಲೆ (ಆರ್‌ಎಫ್‌ಡಿ) ಸಚಿವರು ಮತ್ತು ಇಲಾಖೆಯ ಕಾರ್ಯದರ್ಶಿ ನಡುವಣ ತಿಳುವಳಿಕೆಯ ಪ್ರಮುಖ ದಾಖಲೆಯಾಗದೆ. ಈ ದಾಖಲೆಯು ಒಪ್ಪಿತ ಧ್ಯೇಯೋದ್ದೇಶಗಳು,ನೀತಿಗಳು, ಕಾರ್ಯಕ್ರಮಗಳು ಹಾಗೂ ಯೋಜನೆಗಳನ್ನು ಅನುಷ್ಠಾನಗೊಳಿಸುವಾಗ ಆಗಿರುವ ಪ್ರಗತಿಯನ್ನು ಮಾಪನ ಮಾಡುವುದಕ್ಕೆ ಅಗತ್ಯವಾದ ಸಾಧನಾ ಸೂಚನಗಳು ಮತ್ತು ಗುರಿಗಳನ್ನು ಸಹ ಒಳಗೊಂಡಿರುತ್ತದೆ. ಸಾರ್ವಜನಿಕ ಹಣವನ್ನು ಉತ್ತಮವಾಗಿ ಕಾಲಮಿತಿಯೊಳಗೆ ಮುಕ್ತವಾಗಿ ಪಾರದರ್ಶಕವಾಗಿ ಹಾಗೂ ಮೀಸಲಾಗಿರಿಸಿರುವ ಉದ್ದೇಶಗಳಿಗಾಗಿ ವೆಚ್ಚ ಮಾಡುವ ಬಗ್ಗೆ ಇಲಾಖೆಗಳನ್ನು ಹೊಣೆಗಾರರನ್ನಾಗಿ ಮಾಡುವ ಒಂದು ಸಾಧನವಾಗಿ ಫಲಿತಾಂಶಗಳ ಚೌಕಟ್ಟು ದಾಖಲೆಯು ಇಲಾಖೆಯ ಕಾರ್ಯತಂತ್ರ ರೂಪಿಸುವುದಾಕ್ಕಾಗಿ ತನ್ನ ದೂರದೃಷ್ಟಿ ಗುರಿ, ಧ್ಯೇಯೋದ್ದೇಶಗಳು ಹಾಗೂ ಈ ಗುರಿ ಮತ್ತು ಉದ್ದೇಶಗಳಿಗನುಗುಣವಾಗಿ ಇಲಾಖೆಯ ಕಾರ್ಯ ಚಟುವಟಿಕೆಗಳನ್ನು ಖಚಿತಗೊಳಿಸುತ್ತದೆ.

ರಾಜ್ಯದಲ್ಲಿ 2011–2012ನೇ ಸಾಲಿನಿಂದ ಫಲಿತಾಂಶಗಳ ಚೌಕಟ್ಟು ದಾಖಲೆಯ ಅನುಷ್ಠಾನದ ಉಸ್ತುವಾರಿಯನ್ನು ಸಿಆಸುಇ ಇಲಾಖೆಯ ವತಿಯಿಂದ ವಿತ್ತೀಯ ಕಾರ್ಯನೀತಿ ಸಂಸ್ಥೆಯ ಸಹಭಾಗಿತ್ವದಲ್ಲಿ ನಡೆಸಲಾಗುತಿತ್ತು. ದಿನಾಂಕ: 03–01–2012 ರ ಸಚಿವ ಸಂಪುಟ ಸಭೆಯ ವಿಷಯ ಸಂಖ್ಯೆ ಸಿ 628/2012ರ ನಿರ್ಣಯದನ್ವಯ ಫಲಿತಾಂಶಗಳ ಚೌಕಟ್ಟು ದಾಖಲೆಗಳ ಉಸ್ತುವಾರಿಯನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಗೆ ವರ್ಗಾಯಿಸಲಾಗಿದೆ.

2012–13ನೇ ಸಾಲಿಗೆ ಫಲಿತಾಂಶಗಳ ಚೌಕಟ್ಟು ದಾಖಲೆಗಳ ಕಾರ್ಯಾನುಷ್ಠಾನಕ್ಕೆ 'ಲೆಕ್ಕಶೀರ್ಷಿಕೆ 2515–00–003–0–01 ಫಲಿತಾಂಶ ರಚನಾ ದಾಖಲೆ(ಆರ್‌ಎಫ್‌ಡಿ) ಮತ್ತು ಮೇಲ್ವಿಚಾರಣಾ ಸುಧಾರಣೆಯಡಿ ರೂ 100 ಲಕ್ಷಗಳನ್ನು ಒದಗಿಸಲಾಗಿದೆ.

ದಿನಾಂಕ 17.3.2011ರಂದು ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಜರುಗಿದ ಸಭೆಯ ನಿರ್ಣಯದಂತೆ ಫಲಿತಾಂಶಗಳ ಚೌಕಟ್ಟು ದಾಖಲೆಗಳ ಕಾರ್ಯಾನುಷ್ಠಾನದ ಉಸ್ತುವಾರಿಗಾಗಿ ಅವಶ್ಯಕವಾದ ಈ ಕೆಳಕಾಣಿಸಿದ ಅಧಿಕಾರಿಗಳು/ನೌಕರರನ್ನು ಹೊರಗುತ್ತಿಗೆ ಆಧಾರದಲ್ಲಿ ನೇಮಿಸಿ

ಸೃಜಿಸಲು ಉದ್ದೇಶಿಸಲಾದ ಸಮರ್ಪಕ ಕೋಶವನ್ನು ರಚಿಸಲು ಪ್ರಸ್ತಾವನೆಯನ್ನು ಸಿದ್ಧಪಡಿಸಿ 2012–13ನೇ ಸಾಲಿನಲ್ಲಿ ಒದಗಿಸಲಾಗಿರುವ ಹಣವನ್ನು ಪ್ರಸ್ತಾಪಿಸಲಾದ ಹೊಸ ಯೋಜನೆಗೆ ವಿನಿಯೋಗಿಸಲು ಸರ್ಕಾರಿ ಆದೇಶ ಹೊರಡಿಸುವ ಬಗ್ಗೆ ಆರ್ಥಿಕ ಇಲಾಖೆಯ ಸಹಮತಿಯನ್ನು ಕೋರಲಾಗಿತ್ತು.

**ಫಲಿತಾಂಶಗಳ ಚೌಕಟ್ಟು ದಾಖಲೆಗಳ ಕೋಶದ ಸಿಬ್ಬಂದಿ ವಿವರ:**

| ಕ್ರಸಂ | ಹುದ್ದೆಗಳ ವರ್ಗ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ (ರೂ) * | ಅಂದಾಜು ವಾರ್ಷಿಕ ವೇತನ (ರೂ) |
|---|---|---|---|---|
| 1 | **ವಿಶೇಷ ಕಾರ್ಯದರ್ಶಿ** (ನಿಯೋಜನೆ ಮೇರೆಗೆ ಅಥವಾ ಹೊರಗುತ್ತಿಗೆ ಆಧಾರದಲ್ಲಿ ಅಥವಾ ಸಮಂಜಸ ನಿವೃತ್ತ ಸರ್ಕಾರಿ ನೌಕರರು) | 1 | ವೇತನ ಶ್ರೇಣಿ ರಹಿತ (37400–67000) | 1000000 |
| 2 | **ಸಿಸ್ಟಂ ಮ್ಯಾನೇಜರ್** (Web and MIS Manager) | 1 | 20025-28725 | 600000 |
| 3 | **ವಿಶೇಷಾಧಿಕಾರಿ (ಉಸ್ತುವಾರಿ ಮತ್ತು ಮೌಲ್ಯಮಾಪನ)** | 1 | ವೇತನ ಶ್ರೇಣಿ ರಹಿತ (18150-26925) | 550000 |
| 4 | **ವಿಶೇಷಾಧಿಕಾರಿ (ಸಾಂಖ್ಯಿಕ ಮತ್ತು ಆರ್ಥಿಕ)** | 1 | ವೇತನ ಶ್ರೇಣಿ ರಹಿತ (18150-26925) | 550000 |
| 5 | **ಸಂಶೋಧನಾಧಿಕಾರಿ** | 1 | 11400-21600 | 400000 |
| 6 | ಡಿಟಿಪಿ ಆಪರೇಟರ್ ಹಾಗೂ ಕಛೇರಿ ಸಹಾಯಕ | 2 | 8000-14800 | 300000 |
| 7 | ದಲಾಯತ್ | 2 | 4800-7275 | 150000 |
| | **ಫಲಿತಾಂಶಗಳ ಚೌಕಟ್ಟು ದಾಖಲೆ** ಕೋಶದ ರಚನಾ ವೆಚ್ಚ | | | 500000 |
| | ಪ್ರಯಾಣ ವೆಚ್ಚ | | | 100000 |
| | ದೂರವಾಣಿ ವೆಚ್ಚ | | | 150000 |
| | ಇತರೆ ವೆಚ್ಚ | | | 500000 |
| | ಯಂತ್ರೋಪಕರಣ ಮತ್ತು ಸಾಧನ ಸಾಮಗ್ರಿ | | | 200000 |
| 8 | **ಫಲಿತಾಂಶಗಳ ಚೌಕಟ್ಟು ದಾಖಲೆಗಳ** ಅರ್ಧವಾರ್ಷಿಕ ಪರಿಶೀಲನೆಗಾಗಿ ವಿಶೇಷ ಕಾರ್ಯಪಡೆಯ ತಂಡದ ಸದಸ್ಯರಿಗೆ ಆಸೀನ ಶುಲ್ಕ, ಕಾರ್ಯಾಗಾರ/ತರಬೇತಿ ವೆಚ್ಚ | | | **5000000** |
| | **ಒಟ್ಟು ಮೊತ್ತ** | | | **10000000** |

**ಟಿಪ್ಪಣಿ:** ಎಲ್ಲಾ ಹುದ್ದೆಗಳು ವೇತನ ಶ್ರೇಣಿ ರಹಿತ ಹುದ್ದೆಗಳಾಗಿದ್ದು ನಮೂದಿಸಿರುವ ವೇತನ ಶ್ರೇಣಿಗಳು ಕೇವಲ ಸೂಚಿತವಾಗಿರುತ್ತವೆ.

**ಆರ್ಥಿಕ ಇಲಾಖೆಯು ಸದರಿ ಪ್ರಸ್ತಾವನೆಗೆ ಈ ಕೆಳಕಂಡಂತೆ ತನ್ನ ಅಭಿಪ್ರಾಯವನ್ನು ನೀಡಿರುತ್ತದೆ.**

ಅ) ಯೋಜನಾ ಇಲಾಖೆಯಲ್ಲಿ ಪ್ರತ್ಯೇಕ ಫಲಿತಾಂಶಗಳ ಚೌಕಟ್ಟು ದಾಖಲೆಗಳ (ಆರ್‌ಎಫ್‌ಡಿ) ಕೋಶವನ್ನು ರಚಿಸುವ ಬದಲಾಗಿ ಪಿಎಂಐ ವಿಭಾಗವನ್ನು ಬಲಪಡಿಸಿ ಈ ಹೊಣೆಗಾರಿಕೆಯನ್ನು ನಿಭಾಯಿಸಬಹುದಾಗಿದೆ. ಈ ಉದ್ದೇಶಕ್ಕಾಗಿ 4 ರಿಂದ 5 ಹೊಸ ಹುದ್ದೆಗಳನ್ನು ಪಿಎಂಐ ವಿಭಾಗಕ್ಕೆ ಸೇರಿಸಬಹುದಾಗಿದೆ. ಭಾರತ ಸರ್ಕಾರದ ಪಿಎಂಐ ಸಂಪುಟ ಸಚಿವಾಲಯದಲ್ಲಿ 9 ಅಧಿಕಾರಿ 1 ಸಿಬ್ಬಂದಿ 50 ಕ್ಕಿಂತ ಅಧಿಕ ಇಲಾಖೆಗಳ ಆರ್‌ಪಿಫ್‌ಡಿ ಕಾರ್ಯಾನುಷ್ಠಾನವನ್ನು ಮಾಡುತ್ತಿರುವುದನ್ನು ಗಮನಿಸಬಹುದಾಗಿದೆ.

ಆ) ಪ್ರಸ್ತಾಪಿಸಲಾದ 4–5 ಹೊಸ ಹುದ್ದೆಗಳ ಪೈಕಿ ಕೆಲವು ಹುದ್ದೆಗಳು ವೇತನ ಶ್ರೇಣಿರಹಿತ ಹುದ್ದೆಗಳಾಗಿದ್ದು, ಈ ಪೈಕಿ ಅತ್ಯಂತ ಹಿರಿಯ ಹುದ್ದೆಯು ಸರ್ಕಾರದ ಜಂಟಿಕಾರ್ಯದರ್ಶಿ ಅಥವಾ ಹಿರಿಯ ನಿರ್ದೇಶಕರ ಹುದ್ದೆಯಾಗಬಹುದಾಗಿದೆ. ವಿಶೇಷ ಕಾರ್ಯದರ್ಶಿಗಳ ಶ್ರೇಣಿಯ ಹುದ್ದೆಯ ಸೃಜನೆಯನ್ನು ಸಮರ್ಥಿಸಲಾಗುವುದಿಲ್ಲ.

ಇ) ಆರ್‌ಎಫ್‌ಡಿ ವಿಷಯದಲ್ಲಿ ವಿವಿಧ ಇಲಾಖೆಗಳಲ್ಲಿ ಸಿಬ್ಬಂದಿಗಳ ಬಲವರ್ಧನೆ ಪ್ರಮುಖವಾದ ಅಂಶವಾಗಿರುತ್ತದೆ.

ಈ) ಫಲಿತಾಂಶ ಮತ್ತು ಫಲಶೃತಿಗಳ ಮಾಹಿತಿ ಸಂಗ್ರಹಣ ವ್ಯವಸ್ಥೆಗಳ ಕೊರತೆಗಳಿಂದಾಗಿ ಆರ್‌ಎಫ್‌ಡಿ ಗಳ ಪಾಕ್ಷಿಕ ಪರಿಶೀಲನೆ ಕಾರ್ಯಸಾಧ್ಯವಾಗಿ ಕಾಣುಸುತ್ತಿಲ್ಲ. ಹೆಚ್ಚೆಂದರೆ ಅರ್ಧವಾರ್ಷಿಕ ಪರಿಶೀಲನೆಗಳನ್ನು ಪರಿಗಣಿಸಬಹುದಾಗಿದೆ.

ಉ) ಆದಾಗ್ಯೂ ಎಂಪಿಕ್‌ಗಳನ್ನು ಮಾಸಿಕವಾಗಿ ಕಾರ್ಯದರ್ಶಿಗಳ ಮಟ್ಟದಲ್ಲಿ ಪರಿಶೀಲಿಸುವುದರ ಜೊತೆಗೆ ಉನ್ನತಮಟ್ಟದಲ್ಲಿ ಪಾಕ್ಷಿಕವಾಗಿ ಪರಿಶೀಲಿಸಬಹುದಾಗಿದೆ.

ಆರ್ಥಿಕ ಇಲಾಖೆಯು ನೀಡಿರುವ ಅಭಿಪ್ರಾಯದ ಪುನರ್ ವಿಮರ್ಶೆಗಾಗಿ ದಿನಾಂಕ 21.05.2012 ರಂದು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ಕರೆಯಲಾದ ಸಭೆಯಲ್ಲಿ ಸಹಾ ಆರ್ಥಿಕ ಇಲಾಖೆ ನೀಡಿರುವ ಅಭಿಪ್ರಾಯವನ್ನು ಸಮರ್ಥಿಸುತ್ತಾ ಪ್ರತ್ಯೇಕ ಕೋಶ ರಚನೆಯ ಬದಲಾಗಿ ಯೋಜನಾ ಇಲಾಖೆಯ ಪಿಎಂಐ ವಿಭಾಗವನ್ನು ಬಲಪಡಿಸಿ ಈ ಹೊಣೆಗಾರಿಕೆಯನ್ನು ನಿಭಾಯಿಸಬೇಕೆಂದು ಅಲ್ಲದೇ ಈಗಾಗಲೆ ಯೋಜನಾ ಇಲಾಖೆಯ ಪ್ರಸ್ತಾವನೆ ಸಂಖ್ಯೆ PD.108.PSD-2011 ರಲ್ಲಿ ಕಾರ್ಯದರ್ಶಿ ಹುದ್ದೆಗೆ ಆರ್ಥಿಕ ಇಲಾಖೆ ಸಹಮತಿ ನೀಡಿರುವುದರಿಂದ ಮತ್ತೊಂದು ಕಾರ್ಯದರ್ಶಿ ಹುದ್ದೆಯ ಸೃಜನೆ ಬೇಕಿರುವುದಿಲ್ಲ ಮತ್ತು ಈಗಾಗಲೇ ಒಪ್ಪಿಗೆ ನೀಡಿರುವ ಕಾರ್ಯದರ್ಶಿ ಹುದ್ದೆಯನ್ನು ಫಲಿತಾಂಶಗಳ ಚೌಕಟ್ಟು ದಾಖಲೆಗಳ ಕಾರ್ಯಾನುಷ್ಠಾನಕ್ಕೆ ತೊಡಗಿಸಿಕೊಳ್ಳಲು ಸೂಚಿಸಿ ಆದೇಶ ಹೊರಡಿಸಲು ಒಪ್ಪಿಗೆ ನೀಡಲಾಗಿರುತ್ತದೆ. ಆದುದರಿಂದ ಈ ಆದೇಶ

**ಸರ್ಕಾರಿ ಆದೇಶ ಸಂಖ್ಯೆ. ಪಿಡಿ/02/ಪಿಎಂಐ/2012(ಭಾ–1), ಬೆಂಗಳೂರು ದಿನಾಂಕ:25ನೇ ಜೂನ್ 2012**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯಲ್ಲಿ ಪ್ರಸ್ತಾಪಿಸಲಾದ ಹೊಸ ಯೋಜನೆಯಾದ **"ಫಲಿತಾಂಶ ರಚನಾ ದಾಖಲೆ(ಆರ್‌ಎಫ್‌ಡಿ) ಮತ್ತು ಮೇಲ್ವಿಚಾರಣಾ ಸುಧಾರಣೆ"** ಯನ್ನು ಅನುಷ್ಠಾನಗೊಳಿಸಲು ಪೂರಕವಾಗಿ ಯೋಜನಾ ಇಲಾಖೆಯ ಪಿಎಂಐ ವಿಭಾಗವನ್ನು ಬಲಪಡಿಸಿ ಫಲಿತಾಂಶಗಳ ಚೌಕಟ್ಟು ದಾಖಲೆಗಳನ್ನು ಕಾರ್ಯಗತಗೊಳಿಸುವ ಬಗ್ಗೆ ಈ ಕೆಳಗೆ ಕಾಣಿಸಿದ ಅಂಶಗಳಿಗೆ ಅನುಮೋದನೆ ನೀಡಿ ಆದೇಶಿಸಿದೆ.

1) ಯೋಜನಾ ಇಲಾಖೆಯ ಪಿಎಂಐ ವಿಭಾಗದ ನಿರ್ದೇಶಕರ ಹುದ್ದೆಯನ್ನು ಹಿರಿಯ ನಿರ್ದೇಶಕರ ಹುದ್ದೆಗೆ (ವೇತನ ಶ್ರೇಣಿ 48900–63600) ಮೇಲ್ದರ್ಜೆಗೇರಿಸುವುದು. ಇದಕ್ಕೆ ಅಗತ್ಯ ಅನುಮೋದನೆಯನ್ನು ಸಕ್ಷಮ ಪ್ರಾಧಿಕಾರದಿಂದ ಪಡೆಯತಕ್ಕದ್ದು.

2) ಯೋಜನಾ ಇಲಾಖೆಯಲ್ಲಿ **ಫಲಿತಾಂಶ ರಚನಾ ದಾಖಲೆ** ವಿಷಯದ ಕಾರ್ಯಾನುಷ್ಠಾನದ ಉಸ್ತುವಾರಿಯನ್ನು ಪರಿಣಾಮಕಾರಿಯಾಗಿ ನಿಭಾಯಿಸುವ ಸಲುವಾಗಿ ಪಿಎಂಐ ವಿಭಾಗವನ್ನು ಬಲಪಡಿಸುವುದು. ಈ ಉದ್ದೇಶಕ್ಕಾಗಿ ಈ ಕೆಳಕಂಡ 4 ಹೊಸ ಹುದ್ದೆಗಳನ್ನು ಪಿಎಂಐ ವಿಭಾಗಕ್ಕೆ ಸೇರ್ಪಡೆಗೊಳಿಸುವುದು.

| **ಕ್ರ.ಸಂ** | **ಹುದ್ದೆಗಳ ವರ್ಗ** | **ಹುದ್ದೆಗಳ ಸಂಖ್ಯೆ** | **ಪರಿಷ್ಕೃತ ವೇತನ ಶ್ರೇಣಿ (ರೂ)** |
|---|---|---|---|
| i. | **ಸಿಸ್ಟಂ ಮ್ಯಾನೇಜರ್**<br>**(Web and MIS Manager)** | 1 | 40050-57450 |
| ii. | **ವಿಶೇಷಾಧಿಕಾರಿ (ಉಸ್ತುವಾರಿ ಮತ್ತು ಮೌಲ್ಯಮಾಪನ)** | 1 | ವೇತನ ಶ್ರೇಣಿ ರಹಿತ<br>(36300-53850) |
| iii. | **ಸಂಶೋಧನಾಧಿಕಾರಿ** | 1 | 22800-43200 |
| iv. | **ಡಿಟಿಪಿ ಆಪರೇಟರ್ ಹಾಗೂ ಕಛೇರಿ ಸಹಾಯಕ** | 1 | 16000-29600 |

3) ಆದೇಶದ ಕ್ರ.ಸಂ.2ರಲ್ಲಿ ಪ್ರಸ್ತಾಪಿಸಲಾದ ಹುದ್ದೆಗಳನ್ನು ನಿಯೋಜನೆ ಮೇರೆಗೆ ಅಥವಾ ಬಾಹ್ಯ ಗುತ್ತಿಗೆ ಆಧಾರದಲ್ಲಿ ನೇಮಿಸಿ ಭರ್ತಿಮಾಡುವುದು.

4) 2012–13 ನೇ ಸಾಲಿಗೆ ಫಲಿತಾಂಶಗಳ ಚೌಕಟ್ಟು ದಾಖಲೆಗಳ ಕಾರ್ಯಾನುಷ್ಠಾನದ ಉಸ್ತುವಾರಿಗಾಗಿ "ಲೆಕ್ಕಶೀರ್ಷಿಕೆ 2515–00–003–0–01 ಫಲಿತಾಂಶ ರಚನಾ ದಾಖಲೆ(ಆರ್‌ಎಫ್‌ಡಿ) ಮತ್ತು ಮೇಲ್ವಿಚಾರಣಾ ಸುಧಾರಣೆ"ಯಡಿ ಹಂಚಿಕೆ ಮಾಡಲಾದ ರೂ.100 ಲಕ್ಷಗಳನ್ನು ಸೃಜಿಸಲಾಗುವ ಹೆಚ್ಚುವರಿ ಹುದ್ದೆಗಳ ವೆಚ್ಚ ಅಲ್ಲದೇ ಪ್ರಸ್ತಾವನೆ ಕೋಷ್ಟಕದಲ್ಲಿ ಸೂಚಿಸಿರುವ ಇತರೆ ವೆಚ್ಚಗಳ ಬಾಬ್ತು ಅಂದರೆ ಆರ್‌ಎಫ್‌ಡಿ ಗಳ ಪರಿಶೀಲನೆ ಮಾಡುವ ತಾತ್ಕಾಲಿಕ ಕಾರ್ಯಪಡೆಗಳ ವೆಚ್ಚ, ದೂರವಾಣಿ ವೆಚ್ಚ ಪ್ರಯಾಣವೆಚ್ಚ, ಯಂತ್ರೋಪಕರಣ ಮತ್ತು ಸಾಧನ ಸಾಮಗ್ರಿ, ಕಾರ್ಯಾಗಾರ/ತರಬೇತಿ ವೆಚ್ಚ, ಇತರೆ ವೆಚ್ಚ ಇತ್ಯಾದಿಗಳಿಗೆ ವಿನಿಯೋಗಿಸುವುದು

5) "ಲೆಕ್ಕಶೀರ್ಷಿಕೆ 2515–00–003–0–01 ಫಲಿತಾಂಶ ರಚನಾ ದಾಖಲೆ(ಆರ್‌ಎಫ್‌ಡಿ) ಮತ್ತು ಮೇಲ್ವಿಚಾರಣಾ ಸುಧಾರಣೆ"ಯಡಿ ಹಂಚಿಕೆ ಮಾಡಲಾದ ಹಣವನ್ನು ಖಜಾನೆಯಿಂದ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರವನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ (ಎಸ್1 ಮತ್ತು 2)ರವರಿಗೆ ನೀಡಲಾಗಿದೆ

ಈ ಮೇಲಿನ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ. 238 Exp-6.2012 ದಿನಾಂಕ: 08–05–2012 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲದ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಉಮಾವತಿ,**
ಸರ್ಕಾರದ ಅಧೀನ ಕಾರ್ಯದರ್ಶಿ
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ (ಎಸ್1 ಮತ್ತು 2)

**ಪಿ.ಆರ್. 1952**

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಇಲಾಖೆಯ ಮುಂದಿನ ಐದು ವರ್ಷದ (2012–17) ಕರಡು ಕಾರ್ಯ ವಿಧಾನದ ಯೋಜನೆ ತಯಾರಿಕೆ ಕುರಿತು.

**ಓದಲಾಗಿದೆ :**
1. ಸರ್ಕಾರದ ಪತ್ರ ಸಂ: ಮೂಅಇ 30 ಮೂಇವಿ 2011, ದಿನಾಂಕ: 29–03–2012.
2. ಮುಖ್ಯ ಆರ್ಥಿಕ ಅಧಿಕಾರಿ ಹಾಗೂ ಸಂಸ್ಥೆಯ ಕಾರ್ಯದರ್ಶಿ, ಐಡೆಕ್ ಸಂಸ್ಥೆ, ಇವರ ಪತ್ರ ಸಂ: iDeCK/ 2011-12/ 1793A, ದಿನಾಂಕ: 30–03–2012.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂ: (1)ರ ದಿನಾಂಕ: 29–03–2012ರ ಪತ್ರದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಮುಂದಿನ ಐದು ವರ್ಷಗಳ (2012–17) ಕರಡು ಕಾರ್ಯ ವಿಧಾನದ ಯೋಜನೆ ತಯಾರಿಸುವಂತೆ (Strategic Plan) (2012-2017) ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಐಡೆಕ್ ಸಂಸ್ಥೆ, ಇವರಿಗೆ ಅನುಮತಿ ನೀಡಲಾಗಿದೆ.

2. ಮೇಲೆ ಓದಲಾದ (2)ರ ಪತ್ರದಲ್ಲಿ ಚೀಫ್ ಫೈನಾನ್ಸಿಯಲ್ ಆಫೀಸರ್ ಮತ್ತು ಕಂಪನಿ ಕಾರ್ಯದರ್ಶಿ, ಐಡೆಕ್, ಬೆಂಗಳೂರು, ಇವರು ಮುಂದಿನ ಐದು ವರ್ಷದ ಕರಡು ಕಾರ್ಯ ವಿಧಾನ ಯೋಜನೆ ತಯಾರಿಸಿ ಸರ್ಕಾರಕ್ಕೆ ಸಲ್ಲಿಸಿರುವ ಬಾಬ್ತು ಶುಲ್ಕ ರೂ.1,98,540/– (ರೂಪಾಯಿ ಒಂದು ಲಕ್ಷದ ತೊಂಬತ್ತೆಂಟು ಸಾವಿರದ ಐನೂರ ನಲವತ್ತು ಮಾತ್ರ) ಹಣ ಬಿಡುಗಡೆ ಮಾಡಲು ಕೋರಿ Invoice ಸಲ್ಲಿಸಿರುತ್ತಾರೆ.

### ಸರ್ಕಾರಿ ಆದೇಶ ಸಂಖ್ಯೆ. ಮೂಅಇ 30 ಮೂಇವಿ 2011, ಬೆಂಗಳೂರು ದಿನಾಂಕ: 17–07–2012.

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಗೆ ಐಡೆಕ್ ಸಂಸ್ಥೆಯು ಮುಂದಿನ ಐದು ವರ್ಷದ ಕರಡು ಕಾರ್ಯ ವಿಧಾನದ ಯೋಜನೆ (2012-17) (Strategic Plan for the next 5 years) ತಯಾರಿಸಿ ಸಲ್ಲಿಸಿದರ ಬಾಬ್ತು ಶುಲ್ಕ ರೂ.1,98,540/– (ರೂಪಾಯಿ ಒಂದು ಲಕ್ಷದ ತೊಂಬತ್ತೆಂಟು ಸಾವಿರದ ಐನೂರ ನಲವತ್ತು ಮಾತ್ರ)ಗಳನ್ನು ಐಡೆಕ್ ಸಂಸ್ಥೆ, ಬೆಂಗಳೂರು, ಇವರಿಗೆ ಬಿಡುಗಡೆ ಮಾಡಲು ಸರ್ಕಾರವು ಮಂಜೂರಾತಿ ನೀಡಿದೆ.

2. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 3451–00–090–1–06–059–Infrastructure Preliminary Studies Other Expenditure (2012-13) ಇದರಡಿಯಲ್ಲಿ ಭರಿಸತಕ್ಕದ್ದು.

3. ಸದರಿ ಮೊತ್ತವನ್ನು ಚೀಫ್ ಫೈನಾನ್ಸಿಯಲ್ ಆಫೀಸರ್ ಮತ್ತು ಕಂಪನಿ ಕಾರ್ಯದರ್ಶಿ, ಐಡೆಕ್, ಇವರು ಪೇಯೀಸ್ ರಸೀದಿಯ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ, ಇವರ ಮೇಲು ರುಜುವಿನೊಂದಿಗೆ ರಾಜ್ಯ ಹುಜೂರು ಖಜಾನೆ, ಬೆಂಗಳೂರು, ಇಲ್ಲಿ ತೆಗೆಯಲು ಅನುಮತಿಸಿದೆ.

4. ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2012, ದಿನಾಂಕ: 27–04–2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಗಳಿಗೆ ನೀಡಿರುವ ಆರ್ಥಿಕ ಪ್ರತ್ಯಾ ಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರಮತ್ತು ಅವರ ಹೆಸರಿನಲ್ಲಿ,

**ಎಂ. ಮಂಜುಳ,**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

**ಪಿ.ಆರ್. 1953**

## ಶಿಕ್ಷಣ ಸಚಿವಾಲಯ

**ವಿಷಯ :** 2012ರ ಪರಿಷ್ಕೃತ ವೇತನ ಶ್ರೇಣಿಗಳನ್ನು ಉನ್ನತ ಶಿಕ್ಷಣ ಇಲಾಖೆಯ ವ್ಯಾಪ್ತಿಯ ಅನುದಾನಿತ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿಗಳಿಗೆ ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ಆದೇಶ ಸಂಖ್ಯೆ:ಎಫ್‌ಡಿ 7 ಎಸ್‌ಆರ್‌ಪಿ 2012, ದಿನಾಂಕ;21-04-2012.

**ಪ್ರಸ್ತಾವನೆ:**

2012ನೇ ಪರಿಷ್ಕೃತ ವೇತನ ಶ್ರೇಣಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ಸರ್ಕಾರಿ ನೌಕರರಿಗೆ ಮಂಜೂರು ಮಾಡಲಾಗಿದ್ದು, ಸದರಿ ಆದೇಶದ ಕಂಡಿಕೆ-12 ಹಾಗೂ 12.1ರ ಅಡಿ ಈ ಕೆಳಗಿನಂತೆ ನಮೂದಿಸಲಾಗಿದೆ.

"ಅನುದಾನ ಪಡೆಯುವ ಶಿಕ್ಷಣ ಸಂಸ್ಥೆಗಳ ನೌಕರರಿಗೆ ವಿಶ್ವವಿದ್ಯಾಲಯದ ಬೋಧಕೇತರ ಸಿಬ್ಬಂದಿಗೆ ಮತ್ತು ಸ್ಥಳೀಯ ಸಂಸ್ಥೆಗಳ (ಪಟ್ಟಣ) ನೌಕರರಿಗೆ ಪರಿಷ್ಕೃತ ವೇತನ ಶ್ರೇಣಿಗಳ ಪ್ರಯೋಜನಗಳ ವಿಸ್ತರಣೆ. ಈ ಕುರಿತು ಆದೇಶಗಳನ್ನು ಸಂಬಂಧಪಟ್ಟ ಆಡಳಿತ ಇಲಾಖೆಗಳು ಪ್ರತ್ಯೇಕವಾಗಿ ಹೊರಡಿಸುತ್ತವೆ."

ಈ ಹಿನ್ನೆಲೆಯಲ್ಲಿ ಉನ್ನತ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 264 ಯುಪಿಸಿ 2012 ಬೆಂಗಳೂರು ದಿನಾಂಕ: 11-07-2012**

ರಾಜ್ಯ ಸರ್ಕಾರದ ವೇತನಾನುದಾನ ಪಡೆಯುವ ಉನ್ನತ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಕಾಲೇಜು ಶಿಕ್ಷಣ ಇಲಾಖೆಯ ಪ್ರಾದೇಶಿಕ ಕಛೇರಿಗಳ ಅಡಿಯಲ್ಲಿ ಬರುವ ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳ ರಾಜ್ಯ ವೇತನ ಶ್ರೇಣಿಯಲ್ಲಿರುವ ಬೋಧಕ/ಬೋಧಕೇತರರಿಗೆ ಆದೇಶ ಸಂಖ್ಯೆ:ಎಫ್‌ಡಿ 7 ಎಸ್‌ಆರ್‌ಪಿ 2012, ದಿನಾಂಕ: 21-04-2012ರಲ್ಲಿ ಹೊರಡಿಸಿರುವ 2012ರ ಕರ್ನಾಟಕ ನಾಗರೀಕ ಸೇವಾ (ಪರಿಷ್ಕೃತ ವೇತನ) ನಿಯಮಗಳ ಹಾಗೂ ಸಂಬಂಧಿತ ಆದೇಶಗಳನ್ನು ವಿಸ್ತರಿಸಲು ಸರ್ಕಾರದ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಮನೋಹರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)

**ಪಿ.ಆರ್. 1954**

## ವಸತಿ ಸಚಿವಾಲಯ

**ವಿಷಯ :** ಸರ್ಕಾರದ ಅಪರ ಮುಖ್ಯಕಾರ್ಯದರ್ಶಿಯವರನ್ನು ಸಮಗ್ರ ವಸತಿ ಮತ್ತು ಕೊಳಗೇರಿ ಅಭಿವೃದ್ಧಿ ಕಾರ್ಯಕ್ರಮದ (IHSDP) ರಾಜ್ಯ ಮಟ್ಟದ ಅಧಿಕಾರಯುಕ್ತ ಸಮಿತಿಗೆ ಅಧ್ಯಕ್ಷರನ್ನಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ವಇ 24 ಕೊಮಂಲೆ 2007,ದಿನಾಂಕ:04-08-2007.
2. ಸರ್ಕಾರದ ಆದೇಶ ಸಂಖ್ಯೆ: ವಇ 24 ಕೊಮಂಲೆ 2007,ದಿನಾಂಕ:04-03-2008.
3. ಆಯುಕ್ತರು, ಕಕೊಅಮಂಡಳಿ ಹಾಗೂ ಸದಸ್ಯ ಕಾರ್ಯದರ್ಶಿ, ರಾಜ್ಯ ಮಟ್ಟದ ಅಧಿಕಾರಯುಕ್ತ ಸಮಿತಿ (IHSDP) ಇವರ ಪ್ರಸ್ತಾವನೆ ದಿನಾಂಕ:29-04-2011.

**ಪ್ರಸ್ತಾವನೆ:**

ಭಾರತ ಸರ್ಕಾರದ ನರ್ಮ್ ಯೋಜನೆಯ ಸಮಗ್ರ ವಸತಿ ಮತ್ತು ಕೊಳಗೇರಿ ಅಭಿವೃದ್ಧಿ ಯೋಜನೆ (IHSDP) ಯನ್ನು ರಾಜ್ಯದಲ್ಲಿ ಸುಗಮವಾಗಿ ಅನುಷ್ಠಾನಗೊಳಿಸುವ ಸಲುವಾಗಿ ಮೇಲೆ ಓದಲಾದ (1) ರ ಆದೇಶದಲ್ಲಿ ಸರ್ಕಾರದ ಅಪರ ಮುಖ್ಯಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದ ಅಧಿಕಾರಯುಕ್ತ ಸಮಿತಿಯನ್ನು ರಚಿಸಲಾಗಿತ್ತು.

ಅಂದಿನ ಅಪರ ಮುಖ್ಯಕಾರ್ಯದರ್ಶಿಯಾಗಿದ್ದ ಶ್ರೀಮತಿ ನೀರಜಾ ರಾಜಕುಮಾರ್ ರವರನ್ನು ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ನಿಗಮದ ಅಧ್ಯಕ್ಷರನ್ನಾಗಿ ನೇಮಿಸಿದ್ದರಿಂದ ಕಾರ್ಯಕಾರಿ ಸಮಿತಿ ಸಭೆ ದಿನಾಂಕ:01-03-2008ರ ಆದೇಶದ ಮೇರೆಗೆ ಶ್ರೀಮತಿ ನೀರಜಾ ರಾಜಕುಮಾರ್ ರವರನ್ನು ಸಮಗ್ರ ವಸತಿ ಮತ್ತು ಕೊಳಗೇರಿ ಅಭಿವೃದ್ಧಿ ಯೋಜನೆ (IHSDP) ಯ ರಾಜ್ಯ ಮಟ್ಟದ ಅಧಿಕಾರಿಯುಕ್ತ ಸಮಿತಿಗೆ ಅಧ್ಯಕ್ಷರನ್ನಾಗಿ ನೇಮಿಸಲಾಗಿತ್ತು.

ಶ್ರೀಮತಿ ನೀರಜಾ ರಾಜಕುಮಾರ್ ರವರು ನಿವೃತ್ತರಾದ ಕಾರಣ ರಾಜ್ಯ ಮಟ್ಟದ ಅಧಿಕಾರಯುಕ್ತ ಸಮಿತಿಗೆ ಅಧ್ಯಕ್ಷರನ್ನಾಗಿ ಸರ್ಕಾರದ ಅಪರ ಮುಖ್ಯಕಾರ್ಯದರ್ಶಿಯವರನ್ನು ಸರ್ಕಾರದಿಂದ ನೇಮಕ ಮಾಡಿಕೊಡಬೇಕೆಂದು ಮೇಲೆ ಓದಲಾದ (3) ರ ಪತ್ರದಲ್ಲಿ ಸರ್ಕಾರಕ್ಕೆ ಆಯುಕ್ತರು, ಕಕೊಅಮಂಡಳಿ ರವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸಮಗ್ರ ವಸತಿ ಮತ್ತು ಕೊಳಗೇರಿ ಅಭಿವೃದ್ಧಿ ಯೋಜನೆ (IHSDP) ಯ ಅಧ್ಯಕ್ಷರನ್ನಾಗಿ ನೇಮಿಸುವ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 20 ಕೊಮಂಲೆ 2012, ಬೆಂಗಳೂರು, ದಿನಾಂಕ: 28–06–2012**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ, ಕೇಂದ್ರ ಸರ್ಕಾರದ JNNURM ನ ಸಮಗ್ರ ವಸತಿ ಮತ್ತು ಕೊಳಗೇರಿ ಅಭಿವೃದ್ಧಿ ಯೋಜನೆಯ ಸುಗಮ ಅನುಷ್ಠಾನಕ್ಕಾಗಿ ರಚಿಸಲಾಗಿದ್ದ ರಾಜ್ಯ ಮಟ್ಟದ ಅಧಿಕಾರಯುಕ್ತ ಸಮಿತಿಗೆ (State Level Empowered Committee), ಸರ್ಕಾರದ ಅಪರ ಮುಖ್ಯಕಾರ್ಯದರ್ಶಿ ಹಾಗೂ ಅಧ್ಯಕ್ಷರು, ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ನಿಗಮ ನಿಯಮಿತ ಇವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡಂತೆ ಪುನರ್ ರಚಿಸಲಾಗಿದೆ. ಅಧಿಕಾರಯುಕ್ತ ಸಮಿತಿಯ ಜವಾಬ್ದಾರಿ ಮತ್ತು ಕಾರ್ಯಗಳು ದಿನಾಂಕ: 04–08–2007ರ ಆದೇಶದಲ್ಲಿ ತಿಳಿಸಿರುವಂತೆ ಇರುತ್ತದೆ.

| | |
|---|---|
| ಸರ್ಕಾರದ ಅಪರ ಮುಖ್ಯಕಾರ್ಯದರ್ಶಿ ಹಾಗೂ ಅಧ್ಯಕ್ಷರು, ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ನಿಗಮ ನಿಯಮಿತ | ಅಧ್ಯಕ್ಷರು |
| ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಸತಿ ಇಲಾಖೆ | ಸದಸ್ಯರು |
| ಸರ್ಕಾರದ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| ಸರ್ಕಾರದ ಕಾರ್ಯದರ್ಶಿಗಳು, ಹಣಕಾಸು ಇಲಾಖೆ (ವೆಚ್ಚ) | ಸದಸ್ಯರು |
| ಜಂಟಿ ನಿರ್ದೇಶಕರು (ಯೋಜನೆ), ವಸತಿ ಮತ್ತು ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| ಯೋಜನೆಗೆ ಸಂಬಂಧಿಸಿದ ಅಧಿಕಾರಿಗಳು | |
| ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ | ಸದಸ್ಯ–ಕಾರ್ಯದರ್ಶಿ (Member-Secretary) |

ಕರ್ನಾಟಕ ಸರ್ಕಾರದ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ನಾಗಣ್ಣ,**
ಪೀಠಾಧಿಕಾರಿ–4,
ವಸತಿ ಇಲಾಖೆ.

**ಪಿ.ಆರ್. 1955**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ರಾಜ್ಯದಲ್ಲಿರುವ ಸರ್ಕಾರಿ ನರ್ಸಿಂಗ್ ಶಾಲೆಗಳಲ್ಲಿನ ಮತ್ತು ಖಾಸಗಿ ನರ್ಸಿಂಗ್ ಶಾಲೆಗಳಲ್ಲಿನ ಸರ್ಕಾರಿ ಕೋಟಾದ ಸೀಟುಗಳಿಗೆ ರಾಜ್ಯಮಟ್ಟದ ಕೌನ್ಸಿಲಿಂಗ್ ಮೂಲಕ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** ವೈದ್ಯಕೀಯ ಶಿಕ್ಷಣ ನಿರ್ದೇಶಕರು, ಬೆಂಗಳೂರು ಇವರ ಪತ್ರ ಸಂಖ್ಯೆ:ವೈಶಿನಿ/ಎನ್‌ಆರ್‌ಸಿ (2)/01/2012–13, ದಿನಾಂಕ 03.05.2012.

**ಪ್ರಸ್ತಾವನೆ:**

ವೈದ್ಯಕೀಯ ಶಿಕ್ಷಣ ನಿರ್ದೇಶಕರು, ಬೆಂಗಳೂರು ಇವರು ಮೇಲೆ ಓದಲಾದ ತಮ್ಮ ಪತ್ರದಲ್ಲಿ ದಿನಾಂಕ 13.04.2012 ರಂದು ವೈದ್ಯಕೀಯ ಶಿಕ್ಷಣ ನಿರ್ದೇಶಕರ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯ ಮಟ್ಟದ ಶುಶ್ರೂಷಾ ತರಬೇತಿ ಆಯ್ಕೆ ಸಮಿತಿ ಸಭೆಯಲ್ಲಿನ ತೀರ್ಮಾನದಂತೆ, 2012–13 ನೇ ಸಾಲಿನ ಶೈಕ್ಷಣಿಕ ವರ್ಷದಿಂದ ರಾಜ್ಯದಲ್ಲಿರುವ ಸರ್ಕಾರಿ ನರ್ಸಿಂಗ್ ಶಾಲೆಗಳಲ್ಲಿನ ಮತ್ತು ಖಾಸಗಿ ನರ್ಸಿಂಗ್ ಶಾಲೆಗಳಲ್ಲಿನ ಶೇ.10 ರಷ್ಟು ಸರ್ಕಾರಿ ಕೋಟಾದ ಸೀಟುಗಳಿಗೆ ಶುಶ್ರೂಷಾ ತರಬೇತಿಗಾಗಿ ಅಭ್ಯರ್ಥಿಗಳನ್ನು ರಾಜ್ಯಮಟ್ಟದ ಕೌನ್ಸಿಲಿಂಗ್ ಮೂಲಕ ಆಯ್ಕೆ ಮಾಡಲು ಅನುಮತಿ ನೀಡಿ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, 2012–13 ನೇ ಸಾಲಿನ ಶೈಕ್ಷಣಿಕ ವರ್ಷದಿಂದ ರಾಜ್ಯದಲ್ಲಿರುವ ಸರ್ಕಾರಿ ನರ್ಸಿಂಗ್ ಶಾಲೆಗಳಲ್ಲಿ ಲಭ್ಯವಿರುವ ಎಲ್ಲಾ ಸೀಟುಗಳಿಗೆ ಮತ್ತು ಖಾಸಗಿ ನರ್ಸಿಂಗ್ ಶಾಲೆಗಳಲ್ಲಿನ ಶೇ.10 ರಷ್ಟು ಸರ್ಕಾರಿ

ಕೋಟಾದ ಸೀಟುಗಳಿಗೆ ಶುಶ್ರೂಷಾ ತರಬೇತಿಗಾಗಿ ಅಭ್ಯರ್ಥಿಗಳನ್ನು ರಾಜ್ಯಮಟ್ಟದ ಕೌನ್ಸಿಲಿಂಗ್ ಮೂಲಕ ಆಯ್ಕೆ ಮಾಡಲು ಅನುಮತಿ ನೀಡಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 140 ಎಂಎಂಇ 2011, ಬೆಂಗಳೂರು, ದಿನಾಂಕ 16.06.2012**

2012–13 ನೇ ಸಾಲಿನ ಶೈಕ್ಷಣಿಕ ವರ್ಷದಿಂದ ರಾಜ್ಯದಲ್ಲಿರುವ ಸರ್ಕಾರಿ ನರ್ಸಿಂಗ್ ಶಾಲೆಗಳಲ್ಲಿ ಲಭ್ಯವಿರುವ ಎಲ್ಲಾ ಸೀಟುಗಳಿಗೆ ಮತ್ತು ಖಾಸಗಿ ನರ್ಸಿಂಗ್ ಶಾಲೆಗಳಲ್ಲಿನ ಶೇ.10 ರಷ್ಟು ಸರ್ಕಾರಿ ಕೋಟಾದ ಸೀಟುಗಳಿಗೆ ಶುಶ್ರೂಷಾ ತರಬೇತಿಗಾಗಿ ಅಭ್ಯರ್ಥಿಗಳನ್ನು ರಾಜ್ಯಮಟ್ಟದ ಕೌನ್ಸಿಲಿಂಗ್ ಮೂಲಕ ಆಯ್ಕೆ ಮಾಡಲು ಅನುಮತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ. ಸಾಯಿಬಾಬಾ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

**ಪಿ.ಆರ್. 1956**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ 2012–13ನೇ ಸಾಲಿನ ಪ್ರಥಮ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ:ಯೋಇ 40 ಯೋವಿವಿ 2012, ದಿನಾಂಕ:13.04.2012.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯನ್ನು 2012–13ನೇ ಸಾಲಿನಲ್ಲಿ ಮುಂದುವರೆಸಲಾಗಿದೆ. 2012–13ನೇ ಸಾಲಿನಲ್ಲಿ ಒಟ್ಟು ₹ 30000.00 ಲಕ್ಷಗಳನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಗಳಡಿ ಒದಗಿಸಲಾಗಿದೆ.

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಅನುದಾನ (₹ ಲಕ್ಷಗಳಲ್ಲಿ) |
|---|---|---|
| 1. | 2575-60-265-0-01-059 | 15.00 |
| 2. | 2575-60-265-0-02-059 | 135.00 |
| 3. | 4575-60-800-0-01-132 | 17896.85 |
| 4. | 4575-60-800-0-01-422 | 8590.63 |
| 5. | 4575-60-800-0-01-423 | 3362.52 |
| | ಒಟ್ಟು | **30000.00** |

2012–13ನೇ ಸಾಲಿನಲ್ಲಿ ಪ್ರಥಮ ಕಂತಿನ ಅನುದಾನ ₹ 7388.16 ಲಕ್ಷ (ಎಪ್ಪತ್ತಮೂರು ಕೋಟಿ ಎಂಬತ್ತೆಂಟು ಲಕ್ಷದ ಹದಿನಾರು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಲು ಸರ್ಕಾರವು ಉದ್ದೇಶಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 41 ಯೋವಿವಿ 2012, ಬೆಂಗಳೂರು, 28ನೇ ಜೂನ್ 2012.**

ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯ ಅನುಷ್ಠಾನಕ್ಕಾಗಿ 2012–13ನೇ ಸಾಲಿನಲ್ಲಿ ಪ್ರಥಮ ಕಂತನ್ನು ಅನುಬಂಧ–1 ರಲ್ಲಿ ಸೂಚಿಸಿರುವ ವಿಧಾನಸಭಾ ಕ್ಷೇತ್ರಗಳಿಗೆ ಮತ್ತು ಅನುಬಂಧ–2 ರಲ್ಲಿ ಸೂಚಿಸಿರುವ ವಿಧಾನ ಪರಿಷತ್ ಸದಸ್ಯರುಗಳಿಗೆ ತಲಾ ₹ 24.96 ಲಕ್ಷ (ಇಪ್ಪತ್ತ ನಾಲ್ಕು ಲಕ್ಷದ ತೊಂಬತ್ತಾರು ಸಾವಿರ ರೂಪಾಯಿಗಳು ಮಾತ್ರ) ಗಳಂತೆ ಒಟ್ಟು ರೂ.7388.16 ಲಕ್ಷ (ಎಪ್ಪತ್ತಮೂರು ಕೋಟಿ ಎಂಬತ್ತೆಂಟು ಲಕ್ಷದ ಹದಿನಾರು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಈ ಕೆಳಕಂಡ ಲೆಕ್ಕಶೀರ್ಷಿಕೆಗಳಡಿ ಬಿಡುಗಡೆ ಮಾಡಿದೆ.

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಪ್ರತಿ ಶಾಸಕರುಗಳಿಗೆ (₹ ಲಕ್ಷಗಳಲ್ಲಿ) | ಒಟ್ಟು (₹ ಲಕ್ಷಗಳಲ್ಲಿ) |
|---|---|---|---|
| 1 | 2575-60-265-0-02-059 | 0.10 | 29.60 |
| 2 | 4575-60-800-0-01-132 | 14.91 | 4413.36 |
| 3 | 4575-60-800-0-01-422 | 7.15 | 2116.40 |
| 4 | 4575-60-800-0-01-423 | 2.80 | 828.80 |
| | **ಒಟ್ಟು** | **24.96** | **7388.16** |

2. ಬಿಡುಗಡೆಯಾದ ಈ ಅನುದಾನವನ್ನು ವೈಯಕ್ತಿಕ ಠೇವಣಿಯಲ್ಲಿಡುವ ಬದಲು ಅಗತ್ಯತೆಗೆ ಅನುಗುಣವಾಗಿ ಡ್ರಾ ಮಾಡತಕ್ಕದ್ದು.

3. ಈ ಬಿಡುಗಡೆಯಾದ ಮೊತ್ತಕ್ಕೆ ಜಿಲ್ಲಾಧಿಕಾರಿಗಳು ಆಯಾ ಶಾಸಕರಿಂದ ಕ್ರಿಯಾ ಯೋಜನೆಯನ್ನು ಪಡೆದು ಸರ್ಕಾರದ ಆದೇಶ ಸಂಖ್ಯೆ: ಪಿಡಿ 486 ಪಿಎಂಎಂ 2001, ದಿನಾಂಕ:16.07.2001 ರಲ್ಲಿ ಹಾಗೂ ತದನಂತರ ಹೊರಡಿಸಿದ ಮಾರ್ಗಸೂಚಿಗಳಲ್ಲಿ ನೀಡಿರುವ ಸೂಚನೆಗಳಂತೆ ಅನುಷ್ಠಾನಗೊಳಿಸತಕ್ಕದ್ದು.

4. ನಿಯಮಾನುಸಾರ ಹಣ ಬಳಕೆ ಪತ್ರವನ್ನು ಆಯಾ ಜಿಲ್ಲಾಧಿಕಾರಿಗಳ ಮೇಲು ಸಹಿಯೊಂದಿಗೆ ಸರ್ಕಾರಕ್ಕೆ ಸಲ್ಲಿಸುವುದು. ಬಿಡುಗಡೆ ಮಾಡಿದ ಅನುದಾನವನ್ನು ನಿಗದಿತ ಅವಧಿಯಲ್ಲಿ ಬಳಕೆ ಮಾಡಿಕೊಳ್ಳದಿದ್ದಲ್ಲಿ ಮುಂದಿನ ಕಂತಿನ ಹಣವನ್ನು ಬಿಡುಗಡೆ ಮಾಡಲಾಗುವುದಿಲ್ಲವೆಂದು ಸೂಚಿಸಿದೆ.

5. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಆಇ 04 ಟಿಎಫ್‌ಪಿ 2012, ದಿನಾಂಕ:27.04.2012 ರಲ್ಲಿ ಆಡಳಿತ ಇಲಾಖೆಗಳ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾಗಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಉಮಾವತಿ,**
ಸರ್ಕಾರದ ಅಧೀನ ಕಾರ್ಯದರ್ಶಿ 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 41 ಯೋವಿವಿ 2012 ದಿನಾಂಕ:28.06.2012ರ ಅನುಬಂಧ–1**

(₹ ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ವಿಧಾನಸಭಾ ಕ್ಷೇತ್ರಗಳು | ಲೆಕ್ಕಶೀರ್ಷಿಕೆ 2575–60–265–0–02–059 | ಲೆಕ್ಕಶೀರ್ಷಿಕೆ 4575–60–800–0–01 | | | ಒಟ್ಟು |
|---|---|---|---|---|---|---|
| | | | 132 | 422 | 423 | |
| **1)** | **ಬೀದರ್ ಜಿಲ್ಲೆ ವಿಧಾನಸಭಾ ಕ್ಷೇತ್ರಗಳು** | | | | | |
| 1 | ಬೀದರ್ ದಕ್ಷಿಣ | 0.10 | 14.91 | 7.15 | 2.80 | **24.96** |
| 2 | ಬೀದರ್ ಉತ್ತರ | 0.10 | 14.91 | 7.15 | 2.80 | **24.96** |
| 3 | ಹುಮ್ನಾಬಾದ್ | 0.10 | 14.91 | 7.15 | 2.80 | **24.96** |
| 4 | ಬಸವಕಲ್ಯಾಣ | 0.10 | 14.91 | 7.15 | 2.80 | **24.96** |
| 5 | ಭಾಲ್ಕಿ | 0.10 | 14.91 | 7.15 | 2.80 | **24.96** |
| 6 | ಔರಾದ್ | 0.10 | 14.91 | 7.15 | 2.80 | **24.96** |
| | **ಒಟ್ಟು** | **0.60** | **89.46** | **42.90** | **16.80** | **149.76** |
| 2) | **ಬಳ್ಳಾರಿ ಜಿಲ್ಲೆ ವಿಧಾನ ಸಭಾ ಕ್ಷೇತ್ರಗಳು** | | | | | |
| 1 | ಸಿರಗುಪ್ಪ | 0.10 | 14.91 | 7.15 | 2.80 | **24.96** |
| 2 | ಬಳ್ಳಾರಿ ನಗರ | 0.10 | 14.91 | 7.15 | 2.80 | **24.96** |

| ಕ್ರಮ ಸಂಖ್ಯೆ | ವಿಧಾನಸಭಾ ಕ್ಷೇತ್ರಗಳು | ಲೆಕ್ಕಶೀರ್ಷಿಕೆ 2575–60–265–0–02–059 | ಲೆಕ್ಕಶೀರ್ಷಿಕೆ 4575–60–800–0–01 | | | ಒಟ್ಟು |
|---|---|---|---|---|---|---|
| | | | 132 | 422 | 423 | |
| 3 | ಬಳ್ಳಾರಿ (ಮೀ) | 0.10 | 14.91 | 7.15 | 2.80 | **24.96** |
| 4 | ವಿಜಯನಗರ | 0.10 | 14.91 | 7.15 | 2.80 | **24.96** |
| 5 | ಸಂಡೂರು (ಮೀ) | 0.10 | 14.91 | 7.15 | 2.80 | **24.96** |
| 6 | ಕೂಡ್ಲಗಿ (ಮೀ) | 0.10 | 14.91 | 7.15 | 2.80 | **24.96** |
| 7 | ಕಂಪ್ಲಿ (ಮೀ) | 0.10 | 14.91 | 7.15 | 2.80 | **24.96** |
| 8 | ಹೂವಿನ ಹಡಗಲಿ (ಮೀ) | 0.10 | 14.91 | 7.15 | 2.80 | **24.96** |
| 9 | ಹಗರಿಬೊಮ್ಮನಹಳ್ಳಿ (ಮೀ) | 0.10 | 14.91 | 7.15 | 2.80 | **24.96** |
| **ಒಟ್ಟು** | | **0.90** | **134.19** | **64.35** | **25.20** | **224.64** |
| **3)** | **ಚಿತ್ರದುರ್ಗ ಜಿಲ್ಲೆ ವಿಧಾನಸಭಾ ಕ್ಷೇತ್ರಗಳು** | | | | | |
| 1 | ಚಿತ್ರದುರ್ಗ | 0.10 | 14.91 | 7.15 | 2.80 | **24.96** |
| 2 | ಮೊಳಕಾಲ್ಮೂರು | 0.10 | 14.91 | 7.15 | 2.80 | **24.96** |
| 3 | ಚಳ್ಳಕೆರೆ | 0.10 | 14.91 | 7.15 | 2.80 | **24.96** |
| 4 | ಹಿರಿಯೂರು | 0.10 | 14.91 | 7.15 | 2.80 | **24.96** |
| 5 | ಹೊಳಲ್ಕೆರೆ | 0.10 | 14.91 | 7.15 | 2.80 | **24.96** |
| 6 | ಹೊಸದುರ್ಗ | 0.10 | 14.91 | 7.15 | 2.80 | **24.96** |
| **ಒಟ್ಟು** | | **0.60** | **89.46** | **42.90** | **16.80** | **149.76** |
| **4)** | **ದಾವಣಗರೆ ಜಿಲ್ಲೆ ವಿಧಾನಸಭಾ ಕ್ಷೇತ್ರಗಳು** | | | | | |
| 1 | ಹರಪನಹಳ್ಳಿ | 0.10 | 14.91 | 7.15 | 2.80 | **24.96** |
| 2 | ಹರಿಹರ | 0.10 | 14.91 | 7.15 | 2.80 | **24.96** |
| 3 | ದಾವಣಗೆರೆ ದಕ್ಷಿಣ | 0.10 | 14.91 | 7.15 | 2.80 | **24.96** |
| 4 | ದಾವಣಗೆರೆ ಉತ್ತರ | 0.10 | 14.91 | 7.15 | 2.80 | **24.96** |
| 5 | ಮಾಯಕೊಂಡ | 0.10 | 14.91 | 7.15 | 2.80 | **24.96** |
| 6 | ಜಗಳೂರು | 0.10 | 14.91 | 7.15 | 2.80 | **24.96** |
| 7 | ಚೆನ್ನಗಿರಿ | 0.10 | 14.91 | 7.15 | 2.80 | **24.96** |
| 8 | ಹೊನ್ನಾಳಿ | 0.10 | 14.91 | 7.15 | 2.80 | **24.96** |
| **ಒಟ್ಟು** | | **0.80** | **119.28** | **57.20** | **22.40** | **199.68** |
| **5)** | **ಗುಲ್ಬರ್ಗ ಜಿಲ್ಲೆ ವಿಧಾನ ಸಭಾ ಕ್ಷೇತ್ರಗಳು** | | | | | |
| 1 | ಚಿಂಚೋಳಿ (ಮೀ) | 0.10 | 14.91 | 7.15 | 2.80 | **24.96** |
| 2 | ಗುಲ್ಬರ್ಗ ದಕ್ಷಿಣ | 0.10 | 14.91 | 7.15 | 2.80 | **24.96** |
| 3 | ಅಳಂದ | 0.10 | 14.91 | 7.15 | 2.80 | **24.96** |
| 4 | ಗುಲ್ಬರ್ಗ ಉತ್ತರ | 0.10 | 14.91 | 7.15 | 2.80 | **24.96** |
| 5 | ಗುಲ್ಬರ್ಗ ಗ್ರಾಮೀಣ (ಮೀ) | 0.10 | 14.91 | 7.15 | 2.80 | **24.96** |
| 6 | ಅಫಜಲ್ ಪುರ | 0.10 | 14.91 | 7.15 | 2.80 | **24.96** |
| 7 | ಸೇಡಂ | 0.10 | 14.91 | 7.15 | 2.80 | **24.96** |

| ಕ್ರಮ ಸಂಖ್ಯೆ | ವಿಧಾನಸಭಾ ಕ್ಷೇತ್ರಗಳು | ಲೆಕ್ಕಶೀರ್ಷಿಕೆ 2575–60–265–0–02–059 | ಲೆಕ್ಕಶೀರ್ಷಿಕೆ 4575–60–800–0–01 | | | ಒಟ್ಟು |
|---|---|---|---|---|---|---|
| | | | 132 | 422 | 423 | |
| 8 | ಜೇವರ್ಗಿ | 0.10 | 14.91 | 7.15 | 2.80 | **24.96** |
| 9 | ಚಿತ್ತಾಪುರ | 0.10 | 14.91 | 7.15 | 2.80 | **24.96** |
| **ಒಟ್ಟು** | | **0.90** | **134.19** | **64.35** | **25.20** | **224.64** |
| **6)** | **ಯಾದಗಿರ್ ಜಿಲ್ಲೆ ವಿಧಾನ ಸಭಾ ಕ್ಷೇತ್ರಗಳು** | | | | | |
| 1 | ಯಾದಗಿರ್ | 0.10 | 14.91 | 7.15 | 2.80 | **24.96** |
| 2 | ಶಹಾಪುರ | 0.10 | 14.91 | 7.15 | 2.80 | **24.96** |
| 3 | ಸುರಪುರ (ಮೀ) | 0.10 | 14.91 | 7.15 | 2.80 | **24.96** |
| 4 | ಗುರುಮಿಟ್ಕಲ್ | 0.10 | 14.91 | 7.15 | 2.80 | **24.96** |
| **ಒಟ್ಟು** | | **0.40** | **59.64** | **28.60** | **11.20** | **99.84** |
| **7)** | **ರಾಯಚೂರು ಜಿಲ್ಲೆ ವಿಧಾನ ಸಭಾ ಕ್ಷೇತ್ರಗಳು** | | | | | |
| 1 | ದೇವದುರ್ಗ (ಮೀ) | 0.10 | 14.91 | 7.15 | 2.80 | **24.96** |
| 2 | ರಾಯಚೂರು | 0.10 | 14.91 | 7.15 | 2.80 | **24.96** |
| 3 | ರಾಯಚೂರು ಗ್ರಾಮೀಣ (ಮೀ) | 0.10 | 14.91 | 7.15 | 2.80 | **24.96** |
| 4 | ಮಾನ್ವಿ (ಮೀ) | 0.10 | 14.91 | 7.15 | 2.80 | **24.96** |
| 5 | ಲಿಂಗಸುಗೂರು(ಮೀ) | 0.10 | 14.91 | 7.15 | 2.80 | **24.96** |
| 6 | ಸಿಂಧನೂರು | 0.10 | 14.91 | 7.15 | 2.80 | **24.96** |
| 7 | ಮಸ್ಕಿ (ಮೀ) | 0.10 | 14.91 | 7.15 | 2.80 | **24.96** |
| **ಒಟ್ಟು** | | **0.70** | **104.37** | **50.05** | **19.60** | **174.72** |
| **8)** | **ಕೊಪ್ಪಳ ಜಿಲ್ಲೆ ವಿಧಾನಸಭಾ ಕ್ಷೇತ್ರಗಳು** | | | | | |
| 1 | ಕುಷ್ಟಗಿ | 0.10 | 14.91 | 7.15 | 2.80 | **24.96** |
| 2 | ಯಲಬುರ್ಗ | 0.10 | 14.91 | 7.15 | 2.80 | **24.96** |
| 3 | ಕನಕಗಿರಿ (ಮೀ) | 0.10 | 14.91 | 7.15 | 2.80 | **24.96** |
| 4 | ಗಂಗಾವತಿ | 0.10 | 14.91 | 7.15 | 2.80 | **24.96** |
| 5 | ಕೊಪ್ಪಳ | 0.10 | 14.91 | 7.15 | 2.80 | **24.96** |
| | **ಒಟ್ಟು** | **0.50** | **74.55** | **35.75** | **14.00** | **124.80** |
| **9)** | **ಕೋಲಾರ ಜಿಲ್ಲೆ ವಿಧಾನ ಸಭಾ ಕ್ಷೇತ್ರಗಳು** | | | | | |
| 1 | ಶ್ರೀನಿವಾಸಪುರ | 0.10 | 14.91 | 7.15 | 2.80 | **24.96** |
| 2 | ಮುಳುಬಾಗಿಲು | 0.10 | 14.91 | 7.15 | 2.80 | **24.96** |
| 3 | ಕೆ.ಜಿ.ಎಫ್ | 0.10 | 14.91 | 7.15 | 2.80 | **24.96** |
| 4 | ಕೋಲಾರ | 0.10 | 14.91 | 7.15 | 2.80 | **24.96** |
| 5 | ಬಂಗಾರುಪೇಟೆ | 0.10 | 14.91 | 7.15 | 2.80 | **24.96** |
| 6 | ಮಾಲೂರು | 0.10 | 14.91 | 7.15 | 2.80 | **24.96** |
| | **ಒಟ್ಟು** | **0.60** | **89.46** | **42.90** | **16.80** | **149.76** |

| ಕ್ರಮ ಸಂಖ್ಯೆ | ವಿಧಾನಸಭಾ ಕ್ಷೇತ್ರಗಳು | ಲೆಕ್ಕಶೀರ್ಷಿಕೆ 2575–60–265–0–02–059 | ಲೆಕ್ಕಶೀರ್ಷಿಕೆ 4575–60–800–0–01 | | | ಒಟ್ಟು |
|---|---|---|---|---|---|---|
| | | | 132 | 422 | 423 | |
| **10)** | **ಚಿಕ್ಕಬಳ್ಳಾಪುರ ಜಿಲ್ಲೆ ವಿಧಾನ ಸಭಾ ಕ್ಷೇತ್ರಗಳು** | | | | | |
| 1 | ಚಿಕ್ಕಬಳ್ಳಾಪುರ | 0.10 | 14.91 | 7.15 | 2.80 | **24.96** |
| 2 | ಚಿಂತಾಮಣಿ | 0.10 | 14.91 | 7.15 | 2.80 | **24.96** |
| 3 | ಶಿಡ್ಲಘಟ್ಟ | 0.10 | 14.91 | 7.15 | 2.80 | **24.96** |
| 4 | ಬಾಗೇಪಲ್ಲಿ | 0.10 | 14.91 | 7.15 | 2.80 | **24.96** |
| 5 | ಗೌರಿಬಿದನೂರು | 0.10 | 14.91 | 7.15 | 2.80 | **24.96** |
| | **ಒಟ್ಟು** | **0.50** | **74.55** | **35.75** | **14.00** | **124.80** |
| **11)** | **ತುಮಕೂರು ಜಿಲ್ಲೆ ವಿಧಾನ ಸಭಾ ಕ್ಷೇತ್ರಗಳು** | | | | | |
| 1 | ಪಾವಗಡ | 0.10 | 14.91 | 7.15 | 2.80 | **24.96** |
| 2 | ಶಿರಾ | 0.10 | 14.91 | 7.15 | 2.80 | **24.96** |
| 3 | ತುಮಕೂರು ಗ್ರಾಮಾಂತರ | 0.10 | 14.91 | 7.15 | 2.80 | **24.96** |
| 4 | ಮಧುಗಿರಿ | 0.10 | 14.91 | 7.15 | 2.80 | **24.96** |
| 5 | ಕೊರಟಗೆರೆ (ಮೀ) | 0.10 | 14.91 | 7.15 | 2.80 | **24.96** |
| 6 | ತುಮಕೂರು ನಗರ | 0.10 | 14.91 | 7.15 | 2.80 | **24.96** |
| 7 | ಕುಣಿಗಲ್ | 0.10 | 14.91 | 7.15 | 2.80 | **24.96** |
| 8 | ಗುಬ್ಬಿ | 0.10 | 14.91 | 7.15 | 2.80 | **24.96** |
| 9 | ತುರುವೇಕೆರೆ | 0.10 | 14.91 | 7.15 | 2.80 | **24.96** |
| 10 | ತಿಪಟೂರು | 0.10 | 14.91 | 7.15 | 2.80 | **24.96** |
| 11 | ಚಿಕ್ಕನಾಯಕನ ಹಳ್ಳಿ | 0.10 | 14.91 | 7.15 | 2.80 | **24.96** |
| | **ಒಟ್ಟು** | **1.10** | **164.01** | **78.65** | **30.80** | **274.56** |
| **12)** | **ರಾಮನಗರ ಜಿಲ್ಲೆ ವಿಧಾನಸಭಾ ಕ್ಷೇತ್ರಗಳು** | | | | | |
| 1 | ಕನಕಪುರ | 0.10 | 14.91 | 7.15 | 2.80 | **24.96** |
| 2 | ಮಾಗಡಿ | 0.10 | 14.91 | 7.15 | 2.80 | **24.96** |
| 3 | ರಾಮನಗರ | 0.10 | 14.91 | 7.15 | 2.80 | **24.96** |
| 4 | ಚನ್ನಪಟ್ಟಣ | 0.10 | 14.91 | 7.15 | 2.80 | **24.96** |
| | **ಒಟ್ಟು** | **0.40** | **59.64** | **28.60** | **11.20** | **99.84** |
| **13)** | **ಬೆಂಗಳೂರು ನಗರ ಜಿಲ್ಲೆ ವಿಧಾನ ಸಭಾ ಕ್ಷೇತ್ರಗಳು** | | | | | |
| 1 | ಮಲ್ಲೇಶ್ವರಂ | 0.10 | 14.91 | 7.15 | 2.80 | **24.96** |
| 2 | ರಾಜಾಜಿನಗರ | 0.10 | 14.91 | 7.15 | 2.80 | **24.96** |
| 3 | ಗಾಂಧೀನಗರ | 0.10 | 14.91 | 7.15 | 2.80 | **24.96** |
| 4 | ಚಿಕ್ಕಪೇಟೆ | 0.10 | 14.91 | 7.15 | 2.80 | **24.96** |
| 5 | ದಾಸರಹಳ್ಳಿ | 0.10 | 14.91 | 7.15 | 2.80 | **24.96** |
| 6 | ಚಾಮರಾಜಪೇಟೆ | 0.10 | 14.91 | 7.15 | 2.80 | **24.96** |
| 7 | ಬಸವನಗುಡಿ | 0.10 | 14.91 | 7.15 | 2.80 | **24.96** |

| ಕ್ರಮ ಸಂಖ್ಯೆ | ವಿಧಾನಸಭಾ ಕ್ಷೇತ್ರಗಳು | ಲೆಕ್ಕಶೀರ್ಷಿಕೆ 2575–60–265–0–02–059 | ಲೆಕ್ಕಶೀರ್ಷಿಕೆ 4575–60–800–0–01 | | | ಒಟ್ಟು |
|---|---|---|---|---|---|---|
| | | | 132 | 422 | 423 | |
| 8 | ಜಯನಗರ | 0.10 | 14.91 | 7.15 | 2.80 | **24.96** |
| 9 | ಮಹಾಲಕ್ಷ್ಮೀ ಲೇಔಟ್ | 0.10 | 14.91 | 7.15 | 2.80 | **24.96** |
| 10 | ಹೆಬ್ಬಾಳ | 0.10 | 14.91 | 7.15 | 2.80 | **24.96** |
| 11 | ಪುಲಿಕೇಶಿ ನಗರ (ಮೀ) | 0.10 | 14.91 | 7.15 | 2.80 | **24.96** |
| 12 | ಯಲಹಂಕ | 0.10 | 14.91 | 7.15 | 2.80 | **24.96** |
| 13 | ವಿಜಯ ನಗರ | 0.10 | 14.91 | 7.15 | 2.80 | **24.96** |
| 14 | ಪದ್ಮನಾಭನಗರ | 0.10 | 14.91 | 7.15 | 2.80 | **24.96** |
| 15 | ಆನೇಕಲ್ (ಮೀ) | 0.10 | 14.91 | 7.15 | 2.80 | **24.96** |
| 16 | ಬೆಂಗಳೂರು ದಕ್ಷಿಣ | 0.10 | 14.91 | 7.15 | 2.80 | **24.96** |
| 17 | ಕೆ.ಆರ್.ಪುರಂ | 0.10 | 14.91 | 7.15 | 2.80 | **24.96** |
| 18 | ಬೊಮ್ಮನಹಳ್ಳಿ | 0.10 | 14.91 | 7.15 | 2.80 | **24.96** |
| 19 | ಬ್ಯಾಟರಾಯನಪುರ | 0.10 | 14.91 | 7.15 | 2.80 | **24.96** |
| 20 | ಯಶವಂತಪುರ | 0.10 | 14.91 | 7.15 | 2.80 | **24.96** |
| 21 | ರಾಜರಾಜೇಶ್ವರಿ ನಗರ | 0.10 | 14.91 | 7.15 | 2.80 | **24.96** |
| 22 | ಬಿ.ಟಿ.ಎಂ. ಲೇಔಟ್ | 0.10 | 14.91 | 7.15 | 2.80 | **24.96** |
| 23 | ಮಹದೇವಪುರ (ಮೀ) | 0.10 | 14.91 | 7.15 | 2.80 | **24.96** |
| 24 | ಸರ್ವಜ್ಞ ನಗರ | 0.10 | 14.91 | 7.15 | 2.80 | **24.96** |
| 25 | ಶಾಂತಿನಗರ | 0.10 | 14.91 | 7.15 | 2.80 | **24.96** |
| 26 | ಸಿ.ವಿ.ರಾಮನ್‌ನಗರ(ಮೀ) | 0.10 | 14.91 | 7.15 | 2.80 | **24.96** |
| 27 | ಶಿವಾಜಿನಗರ | 0.10 | 14.91 | 7.15 | 2.80 | **24.96** |
| 28 | ಡೆರಿಕ್ ಎಂ.ಬಿ.ಫುಲಿನಫಾ (ನಾಮ ನಿರ್ದೇಶಿತರು) | 0.10 | 14.91 | 7.15 | 2.80 | **24.96** |
| 29 | ಗೋವಿಂದರಾಜನಗರ | 0.10 | 14.91 | 7.15 | 2.80 | **24.96** |
| | **ಒಟ್ಟು** | **2.90** | **432.39** | **207.35** | **81.20** | **723.84** |
| **14)** | **ಬೆಂಗಳೂರು ಗ್ರಾಮಾಂತರ ಜಿಲ್ಲೆ ವಿಧಾನಸಭಾ ಕ್ಷೇತ್ರಗಳು** | | | | | |
| 1 | ನೆಲಮಂಗಲ | 0.10 | 14.91 | 7.15 | 2.80 | **24.96** |
| 2 | ದೊಡ್ಡಬಳ್ಳಾಪುರ | 0.10 | 14.91 | 7.15 | 2.80 | **24.96** |
| 3 | ದೇವನಹಳ್ಳಿ | 0.10 | 14.91 | 7.15 | 2.80 | **24.96** |
| 4 | ಹೊಸಕೋಟೆ | 0.10 | 14.91 | 7.15 | 2.80 | **24.96** |
| | **ಒಟ್ಟು** | **0.40** | **59.64** | **28.60** | **11.20** | **99.84** |
| **15)** | **ಮೈಸೂರು ಜಿಲ್ಲೆ ವಿಧಾನಸಭಾ ಕ್ಷೇತ್ರಗಳು** | | | | | |
| 1 | ಟಿ.ನರಸೀಪುರ (ಮೀ) | 0.10 | 14.91 | 7.15 | 2.80 | **24.96** |
| 2 | ಕೃಷ್ಣರಾಜ | 0.10 | 14.91 | 7.15 | 2.80 | **24.96** |
| 3 | ಚಾಮರಾಜ | 0.10 | 14.91 | 7.15 | 2.80 | **24.96** |

| ಕ್ರಮ ಸಂಖ್ಯೆ | ವಿಧಾನಸಭಾ ಕ್ಷೇತ್ರಗಳು | ಲೆಕ್ಕಶೀರ್ಷಿಕೆ 2575–60–265–0–02–059 | ಲೆಕ್ಕಶೀರ್ಷಿಕೆ 4575–60–800–0–01 | | | ಒಟ್ಟು |
|---|---|---|---|---|---|---|
| | | | 132 | 422 | 423 | |
| 4 | ನರಸಿಂಹರಾಜ | 0.10 | 14.91 | 7.15 | 2.80 | **24.96** |
| 5 | ಚಾಮುಂಡೇಶ್ವರಿ | 0.10 | 14.91 | 7.15 | 2.80 | **24.96** |
| 6 | ನಂಜನಗೂಡು(ಮೀ) | 0.10 | 14.91 | 7.15 | 2.80 | **24.96** |
| 7 | ಹೆಚ್.ಡಿ.ಕೋಟೆ(ಮೀ) | 0.10 | 14.91 | 7.15 | 2.80 | **24.96** |
| 8 | ಹುಣಸೂರು | 0.10 | 14.91 | 7.15 | 2.80 | **24.96** |
| 9 | ವರುಣ | 0.10 | 14.91 | 7.15 | 2.80 | **24.96** |
| 10 | ಕೃಷ್ಣರಾಜನಗರ | 0.10 | 14.91 | 7.15 | 2.80 | **24.96** |
| 11 | ಪಿರಿಯಾಪಟ್ಟಣ | 0.10 | 14.91 | 7.15 | 2.80 | **24.96** |
| **ಒಟ್ಟು** | | **1.10** | **164.01** | **78.65** | **30.80** | **274.56** |
| **16)** | **ಮಂಡ್ಯ ಜಿಲ್ಲೆಯ ವಿಧಾನ ಸಭಾ ಕ್ಷೇತ್ರಗಳು** | | | | | |
| 1 | ನಾಗಮಂಗಲ | 0.10 | 14.91 | 7.15 | 2.80 | **24.96** |
| 2 | ಮದ್ದೂರು | 0.10 | 14.91 | 7.15 | 2.80 | **24.96** |
| 3 | ಮೇಲುಕೋಟೆ | 0.10 | 14.91 | 7.15 | 2.80 | **24.96** |
| 4 | ಮಳವಳ್ಳಿ(ಮೀ) | 0.10 | 14.91 | 7.15 | 2.80 | **24.96** |
| 5 | ಮಂಡ್ಯ | 0.10 | 14.91 | 7.15 | 2.80 | **24.96** |
| 6 | ಕೆ.ಆರ್.ಪೇಟೆ | 0.10 | 14.91 | 7.15 | 2.80 | **24.96** |
| 7 | ಶ್ರೀರಂಗಪಟ್ಟಣ | 0.10 | 14.91 | 7.15 | 2.80 | **24.96** |
| **ಒಟ್ಟು** | | **0.70** | **104.37** | **50.05** | **19.60** | **174.72** |
| **17)** | **ಚಾಮರಾಜನಗರ ಜಿಲ್ಲೆಯ ವಿಧಾನ ಸಭಾ ಕ್ಷೇತ್ರಗಳು** | | | | | |
| 1 | ಹನೂರು | 0.10 | 14.91 | 7.15 | 2.80 | **24.96** |
| 2 | ಕೊಳ್ಳೇಗಾಲ | 0.10 | 14.91 | 7.15 | 2.80 | **24.96** |
| 3 | ಚಾಮರಾಜನಗರ | 0.10 | 14.91 | 7.15 | 2.80 | **24.96** |
| 4 | ಗುಂಡ್ಲುಪೇಟೆ | 0.10 | 14.91 | 7.15 | 2.80 | **24.96** |
| | **ಒಟ್ಟು** | **0.40** | **59.64** | **28.60** | **11.20** | **99.84** |
| **18)** | **ಕೊಡಗು ಜಿಲ್ಲೆಯ ವಿಧಾನ ಸಭಾ ಕ್ಷೇತ್ರಗಳು** | | | | | |
| 1 | ವಿರಾಜಪೇಟೆ | 0.10 | 14.91 | 7.15 | 2.80 | **24.96** |
| 2 | ಮಡಿಕೇರಿ | 0.10 | 14.91 | 7.15 | 2.80 | **24.96** |
| **ಒಟ್ಟು** | | **0.20** | **29.82** | **14.30** | **5.60** | **49.92** |
| **19)** | **ದಕ್ಷಿಣ ಕನ್ನಡ ಜಿಲ್ಲೆ ವಿಧಾನಸಭಾ ಕ್ಷೇತ್ರಗಳು** | | | | | |
| 1 | ಸುಳ್ಯ | 0.10 | 14.91 | 7.15 | 2.80 | **24.96** |
| 2 | ಪುತ್ತೂರು | 0.10 | 14.91 | 7.15 | 2.80 | **24.96** |
| 3 | ಬೆಳ್ತಂಗಡಿ | 0.10 | 14.91 | 7.15 | 2.80 | **24.96** |
| 4 | ಬಂಟ್ವಾಳ | 0.10 | 14.91 | 7.15 | 2.80 | **24.96** |
| 5 | ಮಂಗಳೂರು | 0.10 | 14.91 | 7.15 | 2.80 | **24.96** |

| ಕ್ರಮ ಸಂಖ್ಯೆ | ವಿಧಾನಸಭಾ ಕ್ಷೇತ್ರಗಳು | ಲೆಕ್ಕಶೀರ್ಷಿಕೆ 2575–60–265–0–02–059 | ಲೆಕ್ಕಶೀರ್ಷಿಕೆ 4575–60–800–0–01 | | | ಒಟ್ಟು |
|---|---|---|---|---|---|---|
| | | | 132 | 422 | 423 | |
| 6 | ಮಂಗಳೂರು ನಗರ | 0.10 | 14.91 | 7.15 | 2.80 | **24.96** |
| 7 | ಮಂಗಳೂರು ದಕ್ಷಿಣ | 0.10 | 14.91 | 7.15 | 2.80 | **24.96** |
| 8 | ಮೂಡಬಿದ್ರಿ | 0.10 | 14.91 | 7.15 | 2.80 | **24.96** |
| | **ಒಟ್ಟು** | **0.80** | **119.28** | **57.20** | **22.40** | **199.68** |
| **20)** | **ಉಡುಪಿ ಜಿಲ್ಲೆಯ ವಿಧಾನ ಸಭಾ ಕ್ಷೇತ್ರಗಳು** | | | | | |
| 1 | ಕಾಪು | 0.10 | 14.91 | 7.15 | 2.80 | **24.96** |
| 2 | ಉಡುಪಿ | 0.10 | 14.91 | 7.15 | 2.80 | **24.96** |
| 3 | ಕುಂದಾಪುರ | 0.10 | 14.91 | 7.15 | 2.80 | **24.96** |
| 4 | ಬೈಂದೂರು | 0.10 | 14.91 | 7.15 | 2.80 | **24.96** |
| 5 | ಕಾರ್ಕಳ | 0.10 | 14.91 | 7.15 | 2.80 | **24.96** |
| | **ಒಟ್ಟು** | **0.50** | **74.55** | **35.75** | **14.00** | **124.80** |
| **21)** | **ಶಿವಮೊಗ್ಗ ಜಿಲ್ಲೆಯ ವಿಧಾನ ಸಭಾ ಕ್ಷೇತ್ರಗಳು** | | | | | |
| 1 | ಶಿವಮೊಗ್ಗ ಗ್ರಾಮಾಂತರ | 0.10 | 14.91 | 7.15 | 2.80 | **24.96** |
| 2 | ಭದ್ರಾವತಿ | 0.10 | 14.91 | 7.15 | 2.80 | **24.96** |
| 3 | ಶಿವಮೊಗ್ಗ | 0.10 | 14.91 | 7.15 | 2.80 | **24.96** |
| 4 | ತೀರ್ಥಹಳ್ಳಿ | 0.10 | 14.91 | 7.15 | 2.80 | **24.96** |
| 5 | ಸಾಗರ | 0.10 | 14.91 | 7.15 | 2.80 | **24.96** |
| 6 | ಸೊರಬ | 0.10 | 14.91 | 7.15 | 2.80 | **24.96** |
| 7 | ಶಿಕಾರಿಪುರ | 0.10 | 14.91 | 7.15 | 2.80 | **24.96** |
| | **ಒಟ್ಟು** | **0.70** | **104.37** | **50.05** | **19.60** | **174.72** |
| **22)** | **ಧಾರವಾಡ ಜಿಲ್ಲೆಯ ವಿಧಾನ ಸಭಾ ಕ್ಷೇತ್ರಗಳು** | | | | | |
| 1 | ಧಾರವಾಡ | 0.10 | 14.91 | 7.15 | 2.80 | **24.96** |
| 2 | ಹುಬ್ಬಳ್ಳಿ–ಧಾರವಾಡ (ಪಶ್ಚಿಮ) | 0.10 | 14.91 | 7.15 | 2.80 | **24.96** |
| 3 | ಹುಬ್ಬಳ್ಳಿ–ಧಾರವಾಡ ಪೂರ್ವ(ಮೀ) | 0.10 | 14.91 | 7.15 | 2.80 | **24.96** |
| 4 | ಹುಬ್ಬಳ್ಳಿ–ಧಾರವಾಡ ಕೇಂದ್ರ | 0.10 | 14.91 | 7.15 | 2.80 | **24.96** |
| 5 | ಕಲಘಟಗಿ | 0.10 | 14.91 | 7.15 | 2.80 | **24.96** |
| 6 | ಕುಂದಗೋಳ | 0.10 | 14.91 | 7.15 | 2.80 | **24.96** |
| 7 | ನವಲಗುಂದ | 0.10 | 14.91 | 7.15 | 2.80 | **24.96** |
| | **ಒಟ್ಟು** | **0.70** | **104.37** | **50.05** | **19.60** | **174.72** |
| **23)** | **ಹಾವೇರಿ ಜಿಲ್ಲೆ ವಿಧಾನಸಭಾ ಕ್ಷೇತ್ರಗಳು** | | | | | |
| 1 | ಶಿಗ್ಗಾಂವ್ | 0.10 | 14.91 | 7.15 | 2.80 | **24.96** |
| 2 | ಹಾನಗಲ್ | 0.10 | 14.91 | 7.15 | 2.80 | **24.96** |
| 3 | ಹಿರೇಕೆರೂರು | 0.10 | 14.91 | 7.15 | 2.80 | **24.96** |
| 4 | ರಾಣೆಬೆನ್ನೂರು | 0.10 | 14.91 | 7.15 | 2.80 | **24.96** |

| ಕ್ರ.ಸಂ. | ಫಲಾನುಭವಿಗಳ ವಿವರ | ಈಗಾಗಲೇ ನೀಡುತ್ತಿರುವ ಘಟಕ ವೆಚ್ಚ (ಮೊತ್ತ ರೂ.ಗಳಲ್ಲಿ) | | | ಪ್ರಸ್ತುತ ರಾಜ್ಯ ಸರ್ಕಾರ ಶೇ.15 ರಷ್ಟು ಹೆಚ್ಚಿಸುತ್ತಿರುವ ಘಟಕ ವೆಚ್ಚ | ಒಟ್ಟು ನೀಡಲಾಗುವ ಘಟಕ ವೆಚ್ಚ (ಮೊತ್ತ ರೂ. ಗಳಲ್ಲಿ) |
|---|---|---|---|---|---|---|
| | | ಕೇಂದ್ರದ ಪಾಲು | ರಾಜ್ಯದ ಪಾಲು | ಒಟ್ಟು | | |
| 1 | 6 ತಿಂಗಳಿಂದ 6 ವರ್ಷ | 2.00 | 2.00 | 4.00 | 0.60 | 4.60 |
| 2 | ಗರ್ಭಿಣಿಯರು, ಬಾಣಂತಿಯರು, ಪ್ರಾಯಪೂರ್ವ ಬಾಲಕಿಯರು, ಅಂಗನವಾಡಿ ಕಾರ್ಯಕರ್ತೆಯರು, ಅಂಗನವಾಡಿ ಸಹಾಯಕಿಯರು | 2.50 | 2.50 | 5.00 | 0.75 | 5.75 |
| 3 | ಅಪೌಷ್ಠಿಕತೆಯಿಂದ ನರಳುತ್ತಿರುವ ಮಕ್ಕಳು | 3.00 | 3.00 | 6.00 | 0.90 | 6.90 |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ. ಆಇ: 387 ವೆಚ್ಚ–3/12, ದಿನಾಂಕ: 05.06.2012 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿಜಯಲಕ್ಷ್ಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ–1,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಪಿ.ಆರ್. 1967**

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಸ್ತ್ರೀಶಕ್ತಿ ಗುಂಪುಗಳು ಉತ್ಪಾದಿಸುವ ಉತ್ಪನ್ನಗಳಿಗೆ ಮಾರಾಟಕ್ಕಾಗಿ ಸಂಚಾರಿ ವಾಹನ ಸೌಲಭ್ಯ ನೀಡುವ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** ದಿನಾಂಕ: 07.05.2012 ರ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಏಕಕಡತ ಪ್ರಸ್ತಾವನೆ ಸಂಖ್ಯೆ:ಮಮಅಇ:ನಿಸ್ತ್ರೀತ(2)1: 2012–2013, ದಿನಾಂಕ:07.05.2012.

**ಪ್ರಸ್ತಾವನೆ:–**

2012–2013ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಸ್ತ್ರೀಶಕ್ತಿ ಗುಂಪುಗಳು ತಯಾರಿಸುವ ಉತ್ಪನ್ನಗಳನ್ನು ಮಾರಾಟ ಮಾಡುವುದಕ್ಕೆ ಸಂಚಾರಿ ವಾಹನಗಳ ಸೌಲಭ್ಯವನ್ನು ಒದಗಿಸುವ ಕುರಿತು ಘೋಷಿಸಲಾಗಿದೆ.

ಸ್ತ್ರೀಶಕ್ತಿ ಸ್ವಸಹಾಯ ಗುಂಪುಗಳ ಮೂಲಕ ಗ್ರಾಮೀಣ ಮಹಿಳೆಯರ ಸಬಲೀಕರಣದ ಧ್ಯೇಯದೊಂದಿಗೆ ಸ್ತ್ರೀಶಕ್ತಿ ಯೋಜನೆಯನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸಲಾಗುತ್ತಿದ್ದು, ಇದರಡಿ ರೂ.1.40 ಲಕ್ಷ ಗುಂಪುಗಳನ್ನು ರಚಿಸಲಾಗಿದ್ದು, ಅಂದಾಜು 20 ಲಕ್ಷ ಮಹಿಳಾ ಸದಸ್ಯರನ್ನು ಒಗ್ಗೂಡಿಸಲಾಗಿದೆ. ಸ್ತ್ರೀಶಕ್ತಿ ಸ್ವಸಹಾಯ ಗುಂಪುಗಳು ಇದುವರೆಗೂ ರೂ.1064.73 ಕೋಟಿ ಉಳಿತಾಯವನ್ನು ಮಾಡಿದ್ದು, ಅಂತರಿಕವಾಗಿ ಹಾಗೂ ಬ್ಯಾಂಕುಗಳಿಂದ ಸಾಲವನ್ನು ಪಡೆದು ಸುಮಾರು 88000 ಸ್ತ್ರೀಶಕ್ತಿ ಗುಂಪುಗಳು ವಿವಿಧ ಆದಾಯೋತ್ಪನ್ನ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುತ್ತಾರೆ. ಗುಂಪುಗಳು ಉತ್ಪಾದಿಸುವ ಉತ್ಪನ್ನಗಳಿಗೆ ಮಾರುಕಟ್ಟೆ ಒದಗಿಸುವ ಸಲುವಾಗಿ ಜಿಲ್ಲಾ ಮಟ್ಟದಲ್ಲಿ 28 ಮಾರುಕಟ್ಟೆ ಸಂಕೀರ್ಣಗಳನ್ನು ಹಾಗೂ 151 ತಾಲ್ಲೂಕುಗಳಲ್ಲಿ ತಾಲ್ಲೂಕು ಸ್ತ್ರೀಶಕ್ತಿ ಭವನಗಳನ್ನು 4 ಕಂದಾಯ ವಿಭಾಗಗಳನ್ನು ಸುಸಜ್ಜಿತ ಬೃಹತ್ ತರಬೇತಿ ಕೇಂದ್ರಗಳನ್ನು ನಿರ್ಮಿಸಲಾಗುತ್ತಿದೆ. ಸ್ತ್ರೀಶಕ್ತಿ ಗುಂಪುಗಳು ಇನ್ನೂ ಹೆಚ್ಚಿನ ಆದಾಯೋತ್ಪನ್ನ ಚಟುವಟಿಕೆಗಳಲ್ಲಿ ತೊಡಗಲು, ಉತ್ಪನ್ನಗಳಿಗೆ ಹೆಚ್ಚಿನ ಮಾರುಕಟ್ಟೆಯನ್ನು ಒದಗಿಸಲು ಹಾಗೂ ಸ್ಥಳೀಯ ಬೇಡಿಕೆಗಳನ್ನು ಈಡೇರಿಸಲು ಶಕ್ತರನ್ನಾಗಿ ಮಾಡುವ ಉದ್ದೇಶದಿಂದ ಪ್ರಾಯೋಗಿಕವಾಗಿ ಸಂಚಾರಿ ಮಾರುಕಟ್ಟೆ ವಾಹನದ ವ್ಯವಸ್ಥೆಯನ್ನು ಜಾರಿಗೊಳಿಸಲು ಉದ್ದೇಶಿಸಲಾಗಿದೆ.

ಸದರಿ ಯೋಜನೆಯನ್ನು ರಾಜ್ಯದ 30 ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲು ಪ್ರತಿ ಜಿಲ್ಲೆಗೆ 1 ವರ್ಷಕ್ಕೆ ರೂ.12.00 ಲಕ್ಷದಂತೆ 30 ಜಿಲ್ಲೆಗಳಿಗೆ 1 ವರ್ಷಕ್ಕೆ ಒಟ್ಟು ರೂ.360.00 ಲಕ್ಷಗಳ ಅನುದಾನ ಅವಶ್ಯಕತೆ ಇರುತ್ತದೆ.

ಆದರೆ ಈ ಯೋಜನೆಯನ್ನು ಪ್ರಾಯೋಗಿಕವಾಗಿ 6 ತಿಂಗಳ ಕಾಲಾವಧಿಗೆ ಮಿತಿಗೊಳಿಸಿ 4 ಕಂದಾಯ ವಿಭಾಗದ ಎರಡೆರಡು ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲು ಯೋಜಿಸಲಾಗಿದ್ದು,

ಅದರಂತೆ ಬೆಂಗಳೂರು ವಿಭಾಗದ ತುಮಕೂರು, ದಾವಣಗೆರೆ ಜಿಲ್ಲೆ, ಮೈಸೂರು ವಿಭಾಗದ ಮೈಸೂರು ಹಾಗೂ ದಕ್ಷಿಣ ಕನ್ನಡ ಜಿಲ್ಲೆ, ಬೆಳಗಾಂ ವಿಭಾಗದ ಬೆಳಗಾಂ ಹಾಗೂ ಧಾರವಾಡ ಜಿಲ್ಲೆ ಗುಲ್ಬರ್ಗ ವಿಭಾಗದ ಗುಲ್ಬರ್ಗ ಹಾಗೂ ಬೀದರ್ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲಾಗುವುದು. ಯೋಜನೆಯ ಅನುಷ್ಠಾನದ ಕುರಿತು ಜಿಲ್ಲೆಗಳಿಂದ ಬಂದ ವರದಿಯನ್ನಾಧರಿಸಿ, ಈ ಜಿಲ್ಲೆಗಳಲ್ಲಿ ಮುಂದುವರೆಸುವ ಬಗ್ಗೆ ಹಾಗೂ ಇತರೆ ಜಿಲ್ಲೆಗಳಿಗೆ ವಿಸ್ತರಿಸುವ ಬಗ್ಗೆ ಕ್ರಮ ವಹಿಸಲಾಗುವುದು. ಚಿಕ್ಕ ಜಿಲ್ಲೆಗಳಾದ ಉಡುಪಿ, ಕೊಡಗು, ಯಾದಗಿರಿ ಜಿಲ್ಲೆಗಳಿಗೆ ಬೇಡಿಕೆಗನುಗುಣವಾಗಿ ನಿಗದಿ ಪಡಿಸಬಹುದಾಗಿದೆ.

ಈ ಯೋಜನೆಯ ಅನುಷ್ಠಾನಕ್ಕಾಗಿ ವಾಹನ ಬಾಡಿಗೆ, ಸಾದಿಲ್ವಾರು ವೆಚ್ಚ, ಮಾರುಕಟ್ಟೆ ಸಲಹೆಗಾರರ ಗೌರವಧನ ಹಾಗೂ ಇತರೆ ವೆಚ್ಚಗಳನ್ನೊಳಗೊಂಡಂತೆ ಪ್ರತಿ ಜಿಲ್ಲೆಗೆ ರೂ.6.00 ಲಕ್ಷಗಳನ್ನು 6 ತಿಂಗಳ ಅವಧಿಗಾಗಿ ನಿಗದಿ ಪಡಿಸಲಾಗಿದ್ದು, 8 ಜಿಲ್ಲೆಗಳಿಗೆ ಒಟ್ಟು ರೂ.48.00 ಲಕ್ಷಗಳ ಅನುದಾನದ ಅವಶ್ಯಕತೆ ಇರುತ್ತದೆ. ಅದರಂತೆ ಪ್ರಸ್ತಾವನೆಯೊಂದಿಗೆ ಸಲ್ಲಿಸಿರುವ ರೂಪುರೇಷೆಗಳನ್ವಯ ಸ್ತ್ರೀಶಕ್ತಿ ಗುಂಪುಗಳು ತಯಾರಿಸುವ ಉತ್ಪನ್ನಗಳನ್ನು ಮಾರಾಟ ಮಾಡಲು ಸಂಚಾರಿ ಮಾರಾಟ ವಾಹನ ಸೌಲಭ್ಯ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಮೇಲೆ ಓದಲಾದ ಏಕಕಡತ ಪ್ರಸ್ತಾವನೆಯಲ್ಲಿ ಕೋರಿರುತ್ತಾರೆ.

**ಆದೇಶ ಸಂಖ್ಯೆ:ಮಮಇ 65 ಮಮಅ 2012, ಬೆಂಗಳೂರು, ದಿನಾಂಕ: 13.06.2012.**

ಮೇಲೆ ವಿವರಿಸಿರುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಸ್ತ್ರೀಶಕ್ತಿ ಯೋಜನೆಯಡಿ ಸ್ತ್ರೀ ಶಕ್ತಿ ಗುಂಪುಗಳು ತಯಾರಿಸುವ ಉತ್ಪನ್ನಗಳನ್ನು ಮಾರಾಟ ಮಾಡುವುದಕ್ಕೆ ಸಂಚಾರಿ ವಾಹನಗಳ ಸೌಲಭ್ಯ ಯೋಜನೆಯನ್ನು ಇದರೊಂದಿಗೆ ಲಗತ್ತಿಸಿರುವ ಅನುಬಂಧದ ಯೋಜನಾ ಮಾರ್ಗಸೂಚಿಗಳಂತೆ ಅನುಷ್ಠಾನಗೊಳಿಸಲು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯವರಿಗೆ ಆಡಳಿತಾತ್ಮಕ ಅನುಮೋದನೆ ನೀಡಿ ಮಂಜೂರಾತಿ ನೀಡಲಾಗಿದೆ.

ಮುಂದುವರೆದು, ಪ್ರಥಮ ಹಂತದಲ್ಲಿ ಈ ಯೋಜನೆಯನ್ನು ಪ್ರಾಯೋಗಿಕವಾಗಿ ಅನುಷ್ಠಾನಗೊಳಿಸಲು 4 ಕಂದಾಯ ವಿಭಾಗದ ಅಂದರೆ ಬೆಂಗಳೂರು ವಿಭಾಗದ ತುಮಕೂರು, ದಾವಣಗೆರೆ ಜಿಲ್ಲೆ, ಮೈಸೂರು ವಿಭಾಗದ ಮೈಸೂರು ಹಾಗೂ ದಕ್ಷಿಣ ಕನ್ನಡ ಜಿಲ್ಲೆ, ಬೆಳಗಾಂ ವಿಭಾಗದ ಬೆಳಗಾಂ ಹಾಗೂ ಧಾರವಾಡ ಜಿಲ್ಲೆ ಮತ್ತು ಗುಲ್ಬರ್ಗ ವಿಭಾಗದ ಗುಲ್ಬರ್ಗ ಹಾಗೂ ಬೀದರ್ ಜಿಲ್ಲೆಗಳು ಒಳಗೊಂಡಂತೆ ಈ ಯೋಜನೆಯ ಅನುಷ್ಠಾನಕ್ಕಾಗಿ ವಾಹನ ಬಾಡಿಗೆ, ಸಾದಿಲ್ವಾರು ವೆಚ್ಚ ಮಾರುಕಟ್ಟೆ ಸಲಹೆಗಾರರ ಗೌರವಧನ ಹಾಗೂ ಇತರೆ ವೆಚ್ಚಗಳನ್ನೊಳಗೊಂಡಂತೆ ಪ್ರತಿ ಜಿಲ್ಲೆಗೆ ತಲಾ ರೂ.6.00 ಲಕ್ಷದಂತೆ 8 ಜಿಲ್ಲೆಗಳಲ್ಲಿ ಒಟ್ಟು ರೂ.48.00 ಲಕ್ಷಗಳನ್ನು ಲಭ್ಯವಿರುವ ಆಯವ್ಯಯದಲ್ಲಿ ಭರಿಸಲು ಸಹ ಅನುಮತಿ ನೀಡಲಾಗಿದೆ.

ಸದರಿ ವೆಚ್ಚವನ್ನು ಸ್ತ್ರೀಶಕ್ತಿ ಯೋಜನೆಯ ಲೆಕ್ಕಶೀರ್ಷಿಕೆ 2235–02–103–0–41 ಯೋಜನೆ – 059 ರಡಿ ಒದಗಿಸಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 391 ವೆಚ್ಚ 3/12, ದಿನಾಂಕ:04.06.2012 ರ ಸಹಮತದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿಜಯಲಕ್ಷ್ಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ–1,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಆದೇಶ ಸಂಖ್ಯೆ:ಮಮಇ:65:ಮಮಅ:2012, ದಿನಾಂಕ: 13.06.2012 ರ ಅನುಬಂಧ**

**ಪೀಠಿಕೆ:–**

ಸ್ವ–ಸಹಾಯ ಗುಂಪುಗಳ ಮೂಲಕ ಗ್ರಾಮೀಣ ಮಹಿಳೆಯರ ಸಬಲೀಕರಣದ ಧ್ಯೇಯದೊಂದಿಗೆ 2000–01ನೇ ಸಾಲಿನಲ್ಲಿ ಸ್ತ್ರೀಶಕ್ತಿ ಯೋಜನೆಯನ್ನು ಅನುಷ್ಠಾನಗೊಳಿಸಲಾಯಿತು. ಸ್ತ್ರೀಶಕ್ತಿ ಯೋಜನೆಯಡಿ ಅಂಗನವಾಡಿ ಕಾರ್ಯಕರ್ತೆಯರ ಮೂಲಕ ಗ್ರಾಮೀಣ ಪ್ರದೇಶದಲ್ಲಿ ಸಮಾಜದ

ಬಡ ಕುಟುಂಬದ, ಸಾಮಾಜಿಕ ಅಥವಾ ಆರ್ಥಿಕ ಹಿನ್ನೆಲೆಯುಳ್ಳ ಸಮಾನ ಮನಸ್ಸಿನ ಪರಸ್ಪರ ವಿಶ್ವಾಸದಿಂದ ಕೂಡಿರುವ ಭೂರಹಿತ ಮಹಿಳಾ ಕೃಷಿ ಕಾರ್ಮಿಕರು, ಪರಿಶಿಷ್ಟ ಜಾತಿ ಅಥವಾ ವರ್ಗಕ್ಕೆ ಸೇರಿದ ಕುಟುಂಬದ 15–20 ಮಹಿಳೆಯರನ್ನು ಒಟ್ಟು ಸೇರಿಸಿ 1.40 ಲಕ್ಷ ಗುಂಪುಗಳನ್ನು ರಚಿಸಲಾಗಿದ್ದು, ಅಂದಾಜು 20 ಲಕ್ಷ ಸದಸ್ಯರನ್ನು ಒಗ್ಗೂಡಿಸಲಾಗಿದೆ.

ಸ್ತ್ರೀಶಕ್ತಿ ಸ್ವ–ಸಹಾಯ ಗುಂಪುಗಳು ಇದುವರೆಗೆ ರೂ.1079.70 ಕೋಟಿ ಉಳಿತಾಯವನ್ನು ಮಾಡಿದ್ದು, ಆಂತರಿಕವಾಗಿ ರೂ.3102.07 ಕೋಟಿ ಹಾಗೂ ಬ್ಯಾಂಕುಗಳಿಂದ ರೂ.1284.16 ಕೋಟಿ ಸಾಲವನ್ನು ಪಡೆದು 88000 ಸ್ತ್ರೀಶಕ್ತಿ ಗುಂಪುಗಳು ವಿವಿಧ ಆದಾಯೋತ್ಪನ್ನ ಚಟುವಟಿಕೆಗಳಾದ ಕೃಷಿ ಆಧಾರಿತ ಮಲ್ಲಿಗೆ ಹೂ, ನರ್ಸರಿ, ತರಕಾರಿ, ಇತರೆ ವ್ಯಾಪಾರಿ ಹೂಗಳು, ಹಣ್ಣು, ಅಣಬೆ ಬೆಳೆಯುವುದು, ಎರೆಹುಳು ಗೊಬ್ಬರ ತಯಾರಿಕೆ, ಇತ್ಯಾದಿ ಮತ್ತು ಕೃಷಿಯೇತರ ಚಟುವಟಿಕೆಗಳಲ್ಲಿ ಸಿದ್ದ ಉಡುಪು, ಉಪ್ಪಿನಕಾಯಿ, ಹಪ್ಪಳ, ಸಾಂಬಾರುಪುಡಿ ತಯಾರಿಕೆ, ಕಂಬಳಿ ನೇಯ್ಗೆ, ಬ್ಯೂಟಿಪಾರ್ಲರ್, ಎಲೆಕ್ಟ್ರಾನಿಕ್ ವಸ್ತುಗಳ ರಿಪೇರಿ, ಎಂಬ್ರಾಯಿಡರಿ, ಫ್ಯಾಷನ್ ಡಿಸೈನಿಂಗ್, ಸಣ್ಣ ವ್ಯಾಪಾರ ಇತ್ಯಾದಿ ಚಟುವಟಿಕೆಗಳಲ್ಲಿ ತೊಡಗಿರುತ್ತಾರೆ.

ಗುಂಪಿನ ಸದಸ್ಯರು ಉತ್ಪಾದಿಸುವ ವಸ್ತುಗಳಿಗೆ ಸೂಕ್ತ ಮಾರುಕಟ್ಟೆ ಕಲ್ಪಿಸಲು ಇಲಾಖೆಯ ಮೂಲಕ ಬ್ರಾಂಡ್ ಕೂಡ ಬಿಡುಗಡೆ ಮಾಡಲಾಗಿದೆ. ಆದಾಯೋತ್ಪನ್ನ ಚಟುವಟಿಕೆಯಲ್ಲಿ ತೊಡಗಿರುವ ಸ್ತ್ರೀಶಕ್ತಿ ಗುಂಪುಗಳನ್ನು ಪ್ರೋತ್ಸಾಹಿಸುವ ನಿಟ್ಟಿನಲ್ಲಿ ಗುಂಪುಗಳಿಗೆ ತಲಾ ರೂ.5000/–ದಂತೆ ಪ್ರೋತ್ಸಾಹಧನ ನೀಡಲಾಗುತ್ತಿದೆ. ಹಾಗೂ ಗುಂಪುಗಳು ಉತ್ಪಾದಿಸುವ ವಸ್ತುಗಳ ಗುಣಮಟ್ಟವನ್ನು ಉತ್ತಮ ಪಡಿಸಿ ಹೆಚ್ಚಿನ ವಸ್ತುಗಳನ್ನು ಉತ್ಪಾದಿಸಲು ಅನುಕೂಲವಾಗುವಂತೆ ಗುಂಪುಗಳ ಆಸಕ್ತಿಗನುಣವಾಗಿ ಕೌಶಲ್ಯ ಅಭಿವೃದ್ಧಿ ತರಬೇತಿಯನ್ನು ನೀಡಲಾಗುತ್ತಿದೆ.

ಆದಾಯೋತ್ಪನ್ನ ಚಟುವಟಿಕೆಯಲ್ಲಿ ತೊಡಗಿರುವ ಸ್ತ್ರೀಶಕ್ತಿ ಗುಂಪುಗಳು ಬ್ಯಾಂಕಿನಿಂದ ಪಡೆಯುವ ಸಾಲದ ಮೊತ್ತ ರೂ.25000 ರಿಂದ 1.00 ಲಕ್ಷದ ಮೇಲಿನ ಬಡ್ಡಿದರಕ್ಕೆ ಶೇಕಡ.6ರಷ್ಟು ಬಡ್ಡಿಯನ್ನು ಸರ್ಕಾರದಿಂದ ಭರಿಸಲು ಸಹಾಯಧನ ನೀಡಲಾಗುತ್ತಿದೆ.

ಗುಂಪುಗಳ ಸದಸ್ಯರು ಉತ್ಪಾದಿಸುವ ವಸ್ತುಗಳಿಗೆ ಮಾರುಕಟ್ಟೆ ಒದಗಿಸಲು ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ವಸ್ತು ಪ್ರದರ್ಶನ ಹಾಗೂ ಮಾರಾಟ ಮೇಳ ಏರ್ಪಡಿಸಲು ಪ್ರತಿ ಜಿಲ್ಲೆಗೆ ರೂ.75000/– ಪ್ರತಿ ವರ್ಷ ನೀಡಲಾಗುತ್ತಿದೆ. ರಾಜ್ಯ ಹಾಗೂ ಅಂತರ ರಾಜ್ಯಗಳ ಮಟ್ಟದಲ್ಲಿ ನಡೆಯುವ ವಸ್ತು ಪ್ರದರ್ಶನ ಹಾಗೂ ಮಾರಾಟ ಮೇಳಗಳಲ್ಲಿ ಮತ್ತು ಕೃಷಿ ಮೇಳಗಳಲ್ಲಿ ಸ್ತ್ರೀಶಕ್ತಿ ಗುಂಪುಗಳು ಉತ್ಪಾದಿಸುವ ಉತ್ಪನ್ನಗಳನ್ನು ಮಾರಾಟ ಮಾಡಲು ಅವಕಾಶ ಕಲ್ಪಿಸಲಾಗುತ್ತಿದೆ.

ಸ್ತ್ರೀಶಕ್ತಿ ಗುಂಪುಗಳು ತಯಾರಿಸಿದ ವಸ್ತುಗಳಿಗೆ ಮಾರುಕಟ್ಟೆ ಸೌಲಭ್ಯವಿಲ್ಲದೆ ತಯಾರಿಸಿದ ಉತ್ಪನ್ನಗಳನ್ನು ಮಾರಾಟ ಮಾಡಲು ಹಾಗೂ ದೊಡ್ಡ ಉದ್ಯಮಿಗಳೊಂದಿಗೆ ಸ್ಪರ್ಧಿಸಲು ಸಾಧ್ಯವಾಗದೇ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಈ ನಿಟ್ಟಿನಲ್ಲಿ ಇಲಾಖೆಯು ಗುಂಪುಗಳ ಕೈ ಬಲಪಡಿಸಲು ಸ್ತ್ರೀಶಕ್ತಿ ಮಾರಕಟ್ಟೆ ಸಂಕೀರ್ಣಗಳನ್ನು ಶಾಶ್ವತವಾಗಿ ಜಿಲ್ಲಾ ಮಟ್ಟಗಳಲ್ಲಿ ಹಾಗೂ ತಾಲ್ಲೂಕು ಮಾರುಕಟ್ಟೆ ಮಳಿಗೆಗಳನ್ನು ತಾಲ್ಲೂಕು ಮಟ್ಟದಲ್ಲಿ ನಿರ್ಮಿಸಲು ಘಟಕ ವೆಚ್ಚವನ್ನು ಬಿಡುಗಡೆ ಮಾಡಲಾಗುತ್ತಿದೆ.

ಗುಂಪುಗಳು ತಯಾರಿಸುವ ವಸ್ತುಗಳಿಗೆ ವಸ್ತು ಪ್ರದರ್ಶನ, ಮಾರಾಟ ವ್ಯವಸ್ಥೆ, ಹಾಗೂ ಭವನ/ಮಾರುಕಟ್ಟೆ ನಿರ್ಮಾಣದ ವ್ಯವಸ್ಥೆಯನ್ನು ಕಲ್ಪಿಸಿದ್ದಾಗ್ಯೂ, ಮಹಿಳೆಯರು ದೂರದ ಸ್ಥಳಗಳಗೆ ಬಂದು ವ್ಯಾಪಾರ ನಡೆಸಲು ಅನಾನುಕೂಲವಾಗಿರುತ್ತದೆ. ಅವರು ಉತ್ಪಾದಿಸುವ ವಸ್ತುಗಳನ್ನು ಸ್ಥಳೀಯ ಪ್ರಸಿದ್ದ ಪ್ರವಾಸ ಸ್ಥಳಗಳಲ್ಲಿ ದೇವಾಸ್ಥಾನಗಳ ಬಳಿ, ಸಂತೆ, ಜಾತ್ರೆ ಇನ್ನಿತರ ಸಮಾರಂಭಗಳಲ್ಲಿ ಮಾರಾಟ ವ್ಯವಸ್ಥೆ ಕಲ್ಪಿಸಿದ್ದಲ್ಲಿ ಹೆಚ್ಚಿನ ಮಾರಾಟವಾಗುವ ಸಾಧ್ಯತೆ ಇರುತ್ತದೆ. ಅನೇಕ ಗುಂಪಿನ ಸದಸ್ಯರು ಸ್ಥಳೀಯವಾಗಿ ವ್ಯಾಪಾರ ಮಾಡಲು ಆಸಕ್ತರಾಗಿರುತ್ತಾರೆ. ಇದಕ್ಕಾಗಿ ಜಿಲ್ಲೆಯಲ್ಲಿ ಸಂಚಾರಿ ವಾಹನಗಳ ವ್ಯವಸ್ಥೆಯನ್ನು ಮಾಡಿದ್ದಲ್ಲಿ ಮಹಿಳೆಯರು ತಯಾರಿಸಿದ ವಸ್ತುಗಳನ್ನು ಸಾಗಾಣಿಕೆ ಮಾಡಿ ಗ್ರಾಮ ಹಾಗೂ ಹೋಬಳಿಗಳ ಮಟ್ಟದಲ್ಲಿ ವ್ಯಾಪಾರ ಮಾಡುವುದು ಸುಲಭವಾಗುತ್ತದೆ. ಈ ಹಿನ್ನೆಲೆಯಲ್ಲಿ ಕೆಳಕಂಡ ಅಂಶಗಳ ಪರಿಧಿಯಲ್ಲಿ ಸಂಚಾರಿ ವಾಹನ ಯೋಜನೆಯನ್ನು ಜಾರಿಗೊಳಿಸಿದಲ್ಲಿ ಸ್ತ್ರೀಶಕ್ತಿ ಗುಂಪಿನ ಸದಸ್ಯರ/ಗ್ರಾಮೀಣ ಮಹಿಳೆಯರು ಆರ್ಥಿಕವಾಗಿ ಹೆಚ್ಚು ಸಬಲರಾಗಲು ಸಾಧ್ಯವಾಗುತ್ತದೆ.

**ಯೋಜನೆಯ ಉದ್ದೇಶ:**

1. ಮಹಿಳೆಯರಿಗೆ ಆರ್ಥಿಕ ಪ್ರಗತಿಯನ್ನು ಸಾಧಿಸುವಂತಹ ಹಾಗೂ ಸಾಮಾಜಿಕ ಬದಲಾವಣೆಗೆ ಸೂಕ್ತ ವಾತಾವರಣವನ್ನು ಮೂಡಿಸುವಂತಹ ಪ್ರಕ್ರಿಯೆಯನ್ನು ಬಲಪಡಿಸುವುದು.
2. ಮಹಿಳೆಯರಲ್ಲಿ ಆತ್ಮವಿಶ್ವಾಸ ಮತ್ತು ಸ್ವಾವಲಂಬನೆ ಮೂಡಿಸಿ ಸಂಪನ್ಮೂಲಗಳ ಮೇಲೆ ಹತೋಟಿ ಹಾಗೂ ಸಾಮೀಪ್ಯವನ್ನು ಸಾಧಿಸುವುದು.
3. ಆದಾಯೋತ್ಪನ್ನ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡು ಉತ್ಪನ್ನ ಮಾಡುವ ವಸ್ತುಗಳನ್ನು ಮಾರಾಟ ಮಾಡುವುದರಿಂದ ಬಡಮಹಿಳೆಯರ ಆದಾಯವನ್ನು ಹೆಚ್ಚಿಸಿ ಅವರಲ್ಲಿ ಆರ್ಥಿಕ ಸ್ಥಿರತೆಯನ್ನು ಮೂಡಿಸುವುದು, ತನ್ಮೂಲಕ ಬಡತನ ನಿವಾರಣೆ ಮಾಡುವುದು.
4. ಗ್ರಾಮ ಮತ್ತು ಹೋಬಳಿ ಮಟ್ಟದಲ್ಲಿ ಮಾರುಕಟ್ಟೆಗೆ ಅವಕಾಶ ಕಲ್ಪಿಸುವುದು.

5. ಸಾಮಾಜಿಕ, ಆರ್ಥಿಕ, ಕಾನೂನು ಸಬಲೀಕರಣಕ್ಕಾಗಿ ಜಾಗೃತಿ ಮೂಡಿಸುವುದು.

6. ಉತ್ಪನ್ನಗಳಿಗೆ ಪ್ರಚಾರ ನೀಡುವುದು.

7. ಸ್ಥಳೀಯ ತರಬೇತಿ, ಪ್ರಾತ್ಯಕ್ಷತೆ ಹಾಗೂ ವಸ್ತುಗಳ ಪ್ರದರ್ಶನಕ್ಕೆ ಎಡೆಮಾಡಿಕೊಡುವುದು.

8. ತಾಲ್ಲೂಕು, ಜಿಲ್ಲೆಯ ವಿವಿಧ ಗುಂಪುಗಳೊಂದಿಗೆ ಸಮನ್ವಯತೆ ಹಾಗೂ ಸಂಪರ್ಕ ಜಾಲ ಕಲ್ಪಿಸುವುದು.

9. ಗುಂಪಿನ, ಗೊಂಚಲಿನ, ಒಕ್ಕೂಟದ ಸದಸ್ಯರಲ್ಲಿ ಸದ್ಭಾವನೆ ಮೂಡಿಸುವುದು.

**ಯೋಜನೆಯ ವ್ಯಾಪ್ತಿ:**

ಸಂಚಾರಿ ಮಾರುಕಟ್ಟೆ ವಾಹನ ಸೌಲಭ್ಯವು ಜಿಲ್ಲೆ/ತಾಲ್ಲೂಕಿನ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ಜಿಲ್ಲಾ, ತಾಲ್ಲೂಕು, ಕೇಂದ್ರಸ್ಥಾನ, ಯಾವುದೇ ಗ್ರಾಮ ಹಾಗೂ ಹೋಬಳಿ ಮಟ್ಟದಲ್ಲಿ ಮಾರಾಟಕ್ಕಾಗಿ ಬಳಸಬಹುದಾಗಿದೆ.

**ಯೋಜನೆಯ ರೂಪುರೇಷೆಗಳು:–**

1. ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಒಕ್ಕೂಟದ ಸಹಯೋಗದೊಂದಿಗೆ ಯೋಜನೆಯನ್ನು ಜಾರಿಗೊಳಿಸುವುದು.

2. ಗುಂಪುಗಳು ತಯಾರಿಸುವ ವಸ್ತುಗಳನ್ನು ಸಂಚಾರಿ ವಾಹನದ ಮೂಲಕ ಗ್ರಾಮ/ಹೋಬಳಿ/ ತಾಲ್ಲೂಕು/ಜಿಲ್ಲೆಗಳಲ್ಲಿ (ಸಂತೆ, ಜಾತ್ರೆ, ಹಬ್ಬ ಇತರೆ ಕಾರ್ಯಕ್ರಮಗಳಲ್ಲಿ) ಮಾರಾಟದ ವ್ಯವಸ್ಥೆ ಕಲ್ಪಿಸುವುದು.

3. ಸಂಚಾರಿ ವಾಹನದಲ್ಲಿ ಸಮಾಲೋಚನೆ ಘಟಕದ ವ್ಯವಸ್ಥೆ ಕಲ್ಪಿಸಿ ಗ್ರಾಮೀಣ ಮಹಿಳೆಯರಿಗೆ ಗುಣಮಟ್ಟದ ವಸ್ತುಗಳ ತಯಾರಿಕೆ, ಮಾರಾಟ ಕೌಶಲ್ಯಗಳ ಕುರಿತು ಪ್ರಾತ್ಯಕ್ಷತೆ ನೀಡುವುದು.

4. ವಿವಿಧ ಕಾನೂನುಗಳ ಅರಿವು/ಲಿಂಗ ಭೇದ ತಾರತಮ್ಯ/ಸಾಕ್ಷರತೆ/ಆರೋಗ್ಯ/ನೈರ್ಮಲ್ಯ ಹಾಗೂ ವಿವಿಧ ಇಲಾಖೆಗಳ ಸೌಲಭ್ಯ ಕುರಿತು ಮಾಹಿತಿ ಹಾಗೂ ಪ್ರಚಾರ ನೀಡುವುದು.

5. ಪ್ರತಿ ಜಿಲ್ಲೆಯಲ್ಲಿ ಮಾರಾಟಕ್ಕೆ ಅನುಕೂಲವಾಗುವಂತಹ ಜಿಲ್ಲೆಗೊಂದರಂತೆ ವಾಹನವನ್ನು ಬಾಡಿಗೆ/ಹೊರಗುತ್ತಿಗೆಯ ಆಧಾರದ ಮೇಲೆ ಪಡೆಯಬೇಕು. (ಕಾರು, ವ್ಯಾನು, ಟೆಂಪೋ, ಅಪೆ ಮಾದರಿ ವಾಹನ/407 ಮಾದರಿ ವಾಹನ ಇತರೆ ಯಾವುದೇ ವಾಹನವನ್ನು ಜಿಲ್ಲಾ ಮಟ್ಟದಲ್ಲಿ ದರಪಟ್ಟಿ/ಟೆಂಡರ್ ಪ್ರಕ್ರಿಯೆ ಮೂಲಕ ಬಾಡಿಗೆಗೆ/ಹೊರ ಗುತ್ತಿಗೆ ಆಧಾರದ ಮೇಲೆ ಪಡೆಯುವುದು. ಬೇಡಿಕೆಗೆ ಅನುಗುಣವಾಗಿ ದಿನಗಳ ಸಂಖ್ಯೆಯನ್ನು ಬದಲಾಯಿಸಿ ಕೊಳ್ಳಬಹುದಾಗಿದೆ.

6. ಸ್ತ್ರೀಶಕ್ತಿ ಗುಂಪುಗಳಲ್ಲಿ ಬೇಡಿಕೆ ಇಲ್ಲದಿದ್ದ ಪಕ್ಷದಲ್ಲಿ ವಾಹನವನ್ನು ಸ್ತ್ರೀಶಕ್ತಿಯೇತರ ಮಹಿಳಾ ಸಂಘಗಳಿಗೆ, ಇತರೆ ಇಲಾಖೆಯ ಮಹಿಳಾ ಸ್ವಸಹಾಯ ಗುಂಪುಗಳ ಮಹಿಳೆಯರ ಉಪಯೋಗಕ್ಕಾಗಿ ನೀಡುವ ಪ್ರಚಾರ, ತರಬೇತಿ ಹಾಗೂ ಮಾರಾಟಕ್ಕೆ ಬಾಡಿಗೆ ಆಧಾರದ ಮೇಲೆ ಬಳಸಬಹುದಾಗಿದೆ.

7. ವಾಹನವನ್ನು ಗುಂಪುಗಳು ತಯಾರಿಸುವ ಉತ್ಪನ್ನಗಳನ್ನು ಸ್ಥಳದಿಂದ ಸ್ಥಳಕ್ಕೆ ಸಾಗಿಸಲೂ ಬಳಸಬಹುದು.

8. ವಾಹನದ ಎರಡೂ ಬದಿಗಳಲ್ಲಿ ಇಲಾಖೆಯ ಬ್ಯಾನರ್ ಕಡ್ಡಾಯವಾಗಿ ಹಾಕತಕ್ಕದ್ದು.

9. ಉತ್ಪನ್ನಗಳ ವಿವರಣೆ ನೀಡುವ ಕರಪತ್ರಗಳನ್ನು ವ್ಯಾಪಾರಕ್ಕಾಗಿ ಪ್ರಚಾರ ನೀಡಲು ಬಳಸುವುದು.

10. ಸಂಚಾರಿ ವಾಹನದ ಮಾರುಕಟ್ಟೆ ಯೋಜನೆಯ ಮೇಲುಸ್ತುವಾರಿ ಮಾಡಲು ಒಬ್ಬ ಮಾರುಕಟ್ಟೆ ಸಲಹೆಗಾರರನ್ನು ಗೌರವಧನದ ಆಧಾರದ ಮೇಲೆ ಆಯ್ಕೆ ಮಾಡಿಕೊಳ್ಳುವುದು.

**ಯೋಜನೆಯ ಅನುಷ್ಠಾನ, ಮೇಲುಸ್ತುವಾರಿ:**

ಈ ಕೆಳಗಿನ ಎಲ್ಲಾ ಕಾರ್ಯ ಯೋಜನೆಯನ್ನು ಮಾನ್ಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಸಮನ್ವಯ ಸಮಿತಿ ಸಭೆಯಲ್ಲಿ ಚರ್ಚಿಸಿ ಅನುಮೋದನೆ ಪಡೆದ ನಂತರ ಅನುಷ್ಠಾನಗೊಳಿಸುವುದು.

1. ಯೋಜನೆಯನ್ನು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ತಾಲ್ಲೂಕು ಒಕ್ಕೂಟಗಳ ಮೂಲಕ ಜಾರಿಗೊಳಿಸುವುದು.

2. ಮೇಲುಸ್ತುವಾರಿಯನ್ನು ಸಂಬಂಧಪಟ್ಟ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು/ ಜಿಲ್ಲಾ ಮಟ್ಟದಲ್ಲಿ ಉಪ ನಿರ್ದೇಶಕರು ಮಾಡತಕ್ಕದ್ದು.

3. ಸಂಚಾರಿ ವಾಹನದ ಮೂಲಕ ಮಾರಾಟ ಮಾಡುವಲ್ಲಿ ಸಂಭವಿಸುವ ಸಮಸ್ಯೆಗಳ ನಿರ್ವಹಣೆಯ ಕುರಿತು ಒಕ್ಕೂಟದ ಸದಸ್ಯರಿಗೆ ತರಬೇತಿ ನೀಡಬೇಕು.

4. ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ/ಒಕ್ಕೂಟದ ಸಲಹೆಗಾರರಿಂದ ತಾಲ್ಲೂಕಿನಲ್ಲಿ ಯಾವ ವಸ್ತುವಿಗೆ ಯಾವ ಯಾವ ಸ್ಥಳಗಳಲ್ಲಿ ಯಾವ ರೀತಿಯ ಬೇಡಿಕೆ ಇದೆ ಎಂಬ ಬಗ್ಗೆ ಸಮೀಕ್ಷೆ ಮಾಡುವ ಮೂಲಕ ಮಾಹಿತಿ ಸಂಗ್ರಹಿಸುವುದು. ಗುಂಪುಗಳು ಉತ್ಪಾದಿಸುವ ವಸ್ತುಗಳ ವಿವರ, ಮಾರಾಟಕ್ಕೆ ಅವಶ್ಯವಿರುವ ಗುಂಪುಗಳ ಬೇಡಿಕೆ,ಪ್ರಮಾಣ ಇತ್ಯಾದಿಗಳ ವಿವರ ತಯಾರಿಸಿ, ಜಿಲ್ಲಾ ಸಮನ್ವಯ ಸಮಿತಿ ಸಭೆ ಮುಂದೆ ಇಡುವುದು.

5. ಉತ್ಪನ್ನದ ದಾಸ್ತಾನು ಯಾರ ಜವಾಬ್ದಾರಿಯಲ್ಲಿರುತ್ತದೆ ಎಂಬುದನ್ನು ನಿಖರವಾಗಿ ನಿರ್ಧರಿಸಿ, ಅದಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಇಡುವುದು.

6. ಬೇಡಿಕೆಗೆ ಅನುಗುಣವಾಗಿ ದಿನಾಂಕ, ಸ್ಥಳ ನಿಗಧಿಪಡಿಸಿ ವಾಹನ ಸಂಚಾರಕ್ಕೆ ರೂಟ್ ನಕ್ಷೆ ತಯಾರಿಸುವುದು.

7. ಮಾರಾಟ ಮಾಡಲು ಬಯಸುವ ಗುಂಪುಗಳು ಗೊಂಚಲಿನ ಮೂಲಕ ಒಕ್ಕೂಟಕ್ಕೆ ನೋಂದಣಿ ಮಾಡಿಕೊಳ್ಳುವುದು.

8. ಗುಂಪಿನ ಸದಸ್ಯರಿಗೆ ಹೆಚ್ಚಿನ ಲಾಭ ಬರುವಂತೆ ಕ್ರಿಯಾ ಯೋಜನೆಯನ್ನು ಹಮ್ಮಿಕೊಳ್ಳುವುದು.

9. ಗುಂಪುಗಳು ಮಾರಾಟದಿಂದ ಪಡೆಯುವ ಲಾಭಾಂಶದಲ್ಲಿ ಒಕ್ಕೂಟಗಳಿಗೆ ನೀಡುವ ಸೇವಾ ಶುಲ್ಕದ ಪ್ರಮಾಣವನ್ನು ಜಿಲ್ಲಾ ಸಮನ್ವಯ ಸಮಿತಿಯಲ್ಲಿ ನಿರ್ಧರಿಸುವುದು.

10. ಸಂಚಾರಿ ಮಾರಾಟ ವಾಹನದ ಖರ್ಚನ್ನು ಭರಿಸಲು ಇಲಾಖೆಯ ಸಹಾಯವು ಒಕ್ಕೂಟಗಳು ಬಲವರ್ಧನೆಯಾಗುವರೆಗೆ ಮಾತ್ರ ಮಿತಿಗೊಳಿಸಲಾಗಿದ್ದು, ನಂತರ ಒಕ್ಕೂಟಗಳೇ ಸ್ವಂತವಾಗಿ ಈ ಯೋಜನೆಯನ್ನು ಮುಂದುವರೆಸಲು ಕಾರ್ಯತಂತ್ರಗಳನ್ನು ರೂಪಿಸುವುದು.

**ಮಾರುಕಟ್ಟೆ ಸಲಹೆಗಾರರ ಕರ್ತವ್ಯಗಳು:–**

1. ತಾಲ್ಲೂಕು/ಜಿಲ್ಲೆಗಳ ವ್ಯಾಪ್ತಿಗೆ ಬರುವಂತಹ ಗುಂಪುಗಳು ಉತ್ಪಾದಿಸುವ ವಸ್ತುಗಳ ಸಮೀಕ್ಷೆ ನಡೆಸುವುದು.

2. ವಾಹನದ ಬಳಕೆಯ ಕುರಿತು ಮಾಸಿಕ ವೇಳಾ ಪಟ್ಟಿಯನ್ನು ತಯಾರಿಸುವುದು.(ರೂಟ್ ನಕ್ಷೆ)

3. ವಸ್ತುಗಳ ಮಾರಾಟಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ನಿರ್ವಹಿಸುವುದು.

4. ಪ್ರತಿ ತಿಂಗಳು ಮಾರಾಟಕ್ಕೆ ಮುಂದೆ ಬಂದ ಗುಂಪುಗಳ ವಿವರ, ವಸ್ತುಗಳ ವಿವರ, ಲಾಭಾಂಶ ಇತರೆ ವಿವರಗಳ ಬಗ್ಗೆ ಮಾಹಿತಿ ತಯಾರಿಸುವುದು.

5. ಒಕ್ಕೂಟವು, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಗುಂಪು ಗೊಂಚಲುಗಳ ನಡುವೆ ಸೇತುವೆಯಾಗಿ ಕಾರ್ಯನಿರ್ವಹಿಸುವುದು.

6. ಸ್ತ್ರೀಶಕ್ತಿ ಗುಂಪುಗಳು ಉತ್ಪಾದಿಸುವ ವಸ್ತುಗಳನ್ನು ಮಾರಾಟ ಮೇಳ, ವಸ್ತು ಪ್ರದರ್ಶನ ವಾರದ ಸಂತೆ, ಜಾತ್ರೆ ಇತರೆ ಕಾರ್ಯಕ್ರಮಗಳಲ್ಲಿ ಮಾರಾಟ ಮಾಡುವಂತೆ ತಿಳುವಳಿಕೆ/ಮಾರ್ಗದರ್ಶನ ನೀಡುವುದು.

7. ಪ್ರತಿ ತಿಂಗಳ ಮಾಸಿಕ/ತ್ರೈಮಾಸಿಕ ವರದಿಗಳನ್ನು ಅವಧಿಯು ಪೂರ್ಣಗೊಂಡ ತಕ್ಷಣ ನೀಡುವುದು.

8. ಸದಸ್ಯರ ಕೌಶಲ್ಯವನ್ನು ವೃದ್ಧಿಸಲು ಸೂಕ್ತ ಪರಿಣಿತರನ್ನು ಕರೆಸಿ ಸ್ತ್ರೀಶಕ್ತಿ ಗುಂಪುಗಳಿಗೆ ಪ್ರಾತ್ಯಕ್ಷತೆ ತರಬೇತಿ ನೀಡುವುದು.

9. ವಿವಿಧ ಇಲಾಖೆಗಳಿಂದ ದೊರೆಯುವ ಸೌಲಭ್ಯ/ತರಬೇತಿ, ಮಾರುಕಟ್ಟೆ ಸೌಲಭ್ಯ ಹಾಗೂ ಇತರೆ ಸೇವೆಗಳನ್ನು ಗುಂಪುಗಳಿಗೆ ಒದಗಿಸಲು ಬಗ್ಗೆ ಕ್ರಮ ವಹಿಸುವುದು.

**ವಿಜಯಲಕ್ಷ್ಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ–1,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಪಿ.ಆರ್. 1968**

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಉದ್ಯೋಗಸ್ಥ ಅಂಗವಿಕಲ ಮಹಿಳೆಯರ ಮತ್ತು ವಿದ್ಯಾರ್ಥಿನಿಯರ ವಸತಿ ನಿಲಯಗಳಲ್ಲಿನ ಫಲಾನುಭವಿಗಳಿಗೆ ಫಥ್ಯಾಹಾರ ಮೊತ್ತವನ್ನು ಮಾಹೆಯಾನ ರೂ.400/–ಗಳಿಂದ ರೂ.800/–ಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಮಮಇ/145/ಪಿಹೆಚ್‌ಪಿ/2006(2), ದಿನಾಂಕ: 29–7–2006.
2) ಸರ್ಕಾರದ ಆದೇಶ ಸಂಖ್ಯೆ: ಮಮಇ/145/ಪಿಹೆಚ್‌ಪಿ/2006(4), ದಿನಾಂಕ: 25–6–2007.
3) ಸರ್ಕಾರದ ಆದೇಶ ಸಂಖ್ಯೆ: ಮಮಇ/109/ಪಿಹೆಚ್‌ಪಿ/2011, ದಿನಾಂಕ:14–12–2010.
4) ನಿರ್ದೇಶಕರು, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ವಿಹಿನಾಸಇ/ಸಿ8/ಉಅಂಮವನಿ ಬೇಡಿಕೆ/11–12/2892, 3333,4846, ದಿ: 8–11–2011, 14–12–2011, ಮತ್ತು 20–1–2012.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ(1)ಮತ್ತು ಉಲ್ಲೇಖ (2)ರ ಸರ್ಕಾರದ ಆದೇಶಗಳಲ್ಲಿ, ವಿಕಲಚೆತನರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯಿಂದ ಉದ್ಯೋಗಸ್ಥ ಅಂಗವಿಕಲ ಮಹಿಳೆಯರ ಮತ್ತು ವಿದ್ಯಾರ್ಥಿನಿಯರ ವಸತಿ ನಿಲಯಗಳನ್ನು ಕೆಲವು ಷರತ್ತುಗಳಿಗೊಳಪಡಿಸಿ ಸ್ವಯಂ ಸೇವಾ ಸಂಸ್ಥೆಗಳ ಮುಖಾಂತರ ನಡೆಸಲು ಮಂಜೂರಾತಿ ನೀಡಲಾಗಿದೆ ಹಾಗೂ ಆಹಾರ ಭತ್ಯೆಯನ್ನು ಮಾಹೆಯಾನ ಪ್ರತಿ ಫಲಾನುಭವಿಗೆ ತಿಂಗಳಿಗೆ ರೂ.400/–ರಂತೆ ನಿಗದಿಪಡಿಸಲಾಗಿದೆ.

ಮೇಲೆ ಓದಲಾದ ಉಲ್ಲೇಖ (3)ರ ಸರ್ಕಾರದ ಆದೇಶದಲ್ಲಿ, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ಅಂಗವಿಕಲ ಮಕ್ಕಳ ಕೇಂದ್ರೀಕೃತ ವಿಶೇಷ ಶೈಕ್ಷಣಿಕ ರಾಜ್ಯ ಸಹಾಯಧನದ ಹೊಸ ಯೋಜನೆಯನ್ನು ಜಾರಿಗೊಳಿಸಲು ಮಂಜೂರಾತಿ ನೀಡಲಾಗಿದ್ದು, ಅದರಲ್ಲಿ ವಸತಿಯುತ ಮಕ್ಕಳ ನಿರ್ವಹಣಾ ವೆಚ್ಚವನ್ನು ಮಾಹೆಯಾನ ರೂ.600/–ಕ್ಕೆ ನಿಗದಿಪಡಿಸಿ ಆದೇಶಿಸಿದೆ.

ಮೇಲೆ ಉಲ್ಲೇಖ(4)ರಲ್ಲಿ ಓದಲಾದ ಪತ್ರಗಳಲ್ಲಿ, ನಿರ್ದೇಶಕರು, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬೆಂಗಳೂರು ಇವರು ಈಗಾಗಲೇ ಕೇಂದ್ರ ಸರ್ಕಾರದಿಂದ ಅನುದಾನ ಪಡೆಯುವ ವಿಶೇಷ ಶಾಲೆಗಳ ಫಲಾನುಭವಿಗಳಿಗೆ ಫಥ್ಯಾಹಾರ ವೆಚ್ಚಕ್ಕಾಗಿ ಮಾಹೆಯಾನ ರೂ.850/– ನೀಡಲಾಗುತ್ತಿದೆ ಎಂದು ತಿಳಿಸುತ್ತಾ, ಅಂಗವಿಕಲ ಮಕ್ಕಳ ಕೇಂದ್ರೀಕೃತ ವಿಶೇಷ ಶೈಕ್ಷಣಿಕ ರಾಜ್ಯ ಸಹಾಯಧನಡಿ ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯಡಿ ಸ್ವಯಂಸೇವಾ ಸಂಸ್ಥೆಗಳ ಮುಖಾಂತರ ನಡೆಸುತ್ತಿರುವ ಉದ್ಯೋಗಸ್ಥ ಅಂಗವಿಕಲ ಮಹಿಳೆಯರ ಮತ್ತು ವಿದ್ಯಾರ್ಥಿನಿಯರ ವಸತಿ ನಿಲಯಗಳಲ್ಲಿನ ಪ್ರತಿ ಫಲಾನುಭವಿಗೆ ಫಥ್ಯಾಹಾರ ವೆಚ್ಚವಾಗಿ ಮಾಹೆಯಾನ ರೂ.400/–ನ್ನು ನೀಡಲಾಗುತ್ತಿದ್ದು, ಇತ್ತೀಚಿನ ದಿನಗಳಲ್ಲಿ ಆಹಾರ ಧಾನ್ಯಗಳು, ತರಕಾರಿ, ಇತರೆ ಪದಾರ್ಥಗಳ ದರಗಳು ಹೆಚ್ಚಾಗಿರುವ ಹಿನ್ನೆಲೆಯಲ್ಲಿ, ಉದ್ಯೋಗಸ್ಥ ಅಂಗವಿಕಲ ಮಹಿಳೆಯರ ಮತ್ತು ವಿದ್ಯಾರ್ಥಿನಿಯರ ವಸತಿ ನಿಲಯಗಳಲ್ಲಿನ ಫಲಾನುಭವಿಗಳಿಗೆ ಫಥ್ಯಾಹಾರ ಮೊತ್ತವನ್ನು ರೂ.850/–ಕ್ಕೆ ಹೆಚ್ಚಿಸುವಂತೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 246 ಪಿಹೆಚ್‌ಪಿ 2011, ಬೆಂಗಳೂರು, ದಿನಾಂಕ: 2-6-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ರಾಜ್ಯದಲ್ಲಿ ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯಿಂದ ಸ್ವಯಂ ಸೇವಾ ಸಂಸ್ಥೆಗಳ ಮುಖಾಂತರ ನಡೆಸುತ್ತಿರುವ ಉದ್ಯೋಗಸ್ಥ ಅಂಗವಿಕಲ ಮಹಿಳೆಯರ ಹಾಗೂ ವಿದ್ಯಾರ್ಥಿನಿಯರ ವಸತಿ ನಿಲಯಗಳಲ್ಲಿನ ಫಲಾನುಭವಿಗಳಿಗೆ 2012–13ನೇ ಸಾಲಿನಿಂದ ಜಾರಿಗೆ ಬರುವಂತೆ ಪಥ್ಯಾಹಾರ ವೆಚ್ಚವನ್ನು ಮಾಹೆಯಾನ ರೂ 400/–ರಿಂದ ರೂ.800/–ಕ್ಕೆ ಹೆಚ್ಚಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಇದಕ್ಕಾಗಿ ತಗಲುವ ಹೆಚ್ಚುವರಿ ಮೊತ್ತವನ್ನು 2012–13ನೇ ಸಾಲಿಗೆ ಲೆಕ್ಕಶೀರ್ಷಿಕೆ 2235–02–101–0–50 ಯೋಜನೇತರ ಉಪಲೆಕ್ಕಶೀರ್ಷಿಕೆ 059ರಡಿ ಒದಗಿಸಲಾಗಿರುವ ಆಯವ್ಯಯದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 164 ವೆಚ್ಚ–3 2012, ದಿನಾಂಕ: 2–5–2012ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕಮಲಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಪಿ.ಆರ್. 1969**

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ವಿಕಲಚೇತನರಿಗಾಗಿ ಉದ್ಯೋಗ ಕೋಶ ಪ್ರಾರಂಭಿಸಲು ಆಡಳಿತಾತ್ಮಕ ಮಂಜೂರಾತಿಯನ್ನು ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಪತ್ರ ಸಂಖ್ಯೆ: ವಿಹಿನಾಸಇ: ಸಿ–9:ಯೋ/ಉ.ಕೋಶ/2011–12/3321, ದಿನಾಂಕ:14–12–2011 ಮತ್ತು ವಿಹಿನಾಸಇ/ಸಿ.9/ಆಯವ್ಯಯ ಶಾಖೆ:ಉ.ಕೋ.28: 2011–12:226 ದಿನಾಂಕ 21.04.2012

**ಪ್ರಸ್ತಾವನೆ:**

ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆರವರು ಮೇಲೆ ಓದಲಾದ ದಿನಾಂಕ 14–12–2011 ಮತ್ತು 21–04–2012ರ ಪತ್ರಗಳಲ್ಲಿ ದಿನಾಂಕ:28–11–2011ರಂದು ನಡೆದ ಎಂ.ಪಿಕ್ ಸಭೆಯಲ್ಲಿ ವಿಕಲಚೇತನರಿಗೆ ಉದ್ಯೋಗಗಳನ್ನು ಒದಗಿಸುವ ಸಂಬಂಧ ಉದ್ಯೋಗಕೋಶವನ್ನು ಪ್ರಾರಂಭಿಸಲು ಅಗತ್ಯ ಕ್ರಮ ತೆಗೆದುಕೊಳ್ಳಲು ತಿಳಿಸಲಾಗಿದೆ. 2001ರ ಜನಗಣತಿಯ ಪ್ರಕಾರ ರಾಜ್ಯದಲ್ಲಿ 940628 ವಿಕಲಚೇತನರಿದ್ದು, ಅವರಲ್ಲಿ ಸುಮಾರು 369257 ವಿಕಲಚೇತನರು 18 ರಿಂದ 45 ವಯೋಮಾನದವರಾಗಿದ್ದು, ಇವರುಗಳಲ್ಲಿ ಶೇ.90ರಷ್ಟು ವಿಕಲಚೇತನರು ನಿರುದ್ಯೋಗಿಗಳಾಗಿದ್ದು ಆರ್ಥಿಕವಾಗಿ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಸರ್ಕಾರದ ಆದೇಶದಂತೆ ಎಲ್ಲಾ ಇಲಾಖೆಗಳು ವಿಕಲಚೇತನರಿಗೆ ಮೀಸಲಿರಿಸುವ ಹುದ್ದೆಗಳನ್ನು ನಿಯಮಾನುಸಾರ ಭರ್ತಿ ಮಾಡಿಕೊಳ್ಳುತ್ತಿಲ್ಲದಿರುವುದು ಕಂಡುಬಂದಿದೆ. ಅಂಗವಿಕಲರ ಅಧಿನಿಯಮ 1995ರ ನಿಯಮ 41ರಲ್ಲಿ ಎಲ್ಲಾ ಸಮುಚಿತ ಸರ್ಕಾರಗಳು ಮತ್ತು ಪ್ರಾಧಿಕಾರಗಳು ತಮ್ಮ ಹಣಕಾಸಿನ ಮತ್ತು ಅಭಿವೃದ್ಧಿಯ ಮಿತಿಯೊಳಗೆ ಸಾರ್ವಜನಿಕ ಮತ್ತು ಅನುದಾನಿತ ಸಂಸ್ಥೆಗಳು ತಮ್ಮಲ್ಲಿರುವ ನೌಕರರ ಪೈಕಿ ಕನಿಷ್ಠ ಶೇ.5ರಷ್ಟು ವಿಕಲಚೇತನರನ್ನು ನೇಮಿಸಿಕೊಳ್ಳಲು ಅವಕಾಶವಿರುತ್ತದೆ. ಖಾಸಗಿ ವಲಯದಲ್ಲಿಯೂ ವಿಕಲಚೇತನರ ನೇಮಕಾತಿಗೆ ಸಾಕಷ್ಟು ಅವಕಾಶಗಳಿವೆ. ವಿಕಲಚೇತನರಿಗೆ ಮೀಸಲಿಟ್ಟಿರುವ ಹುದ್ದೆಗಳ ನೇಮಕಾತಿ ಹಾಗೂ ಸಾರ್ವಜನಿಕ ಮತ್ತು ಖಾಸಗಿ ವಲಯಗಳಲ್ಲಿ ವಿಕಲಚೇತನರಿಗೆ ಉದ್ಯೋಗಾವಕಾಶಗಳನ್ನು ಕಲ್ಪಿಸಿಕೊಡುವುದು ಮತ್ತು ಸ್ವಯಂ ಉದ್ಯೋಗಗಳನ್ನು ಕೈಗೊಳ್ಳಲು ಸೂಕ್ತ ಮಾರ್ಗದರ್ಶನ ಅರಿವು ಮೂಡಿಸುವುದು ಅಗತ್ಯವಿದ್ದು, ಈ ದಿಶೆಯಲ್ಲಿ ನಿರುದ್ಯೋಗಿ ವಿಕಲಚೇತನರಿಗೆ ಉದ್ಯೋಗ ಅವಕಾಶಗಳನ್ನು ಕಲ್ಪಿಸಿಕೊಡುವ ಸಂಬಂಧ ಉದ್ಯೋಗ ಕೋಶವನ್ನು ಪ್ರಾರಂಭಿಸುವುದು ಅಗತ್ಯವಿದೆ. ವಿಕಲಚೇತನರಿಗೆ ಸೂಕ್ತ ಇರುವ ಹುದ್ದೆಗಳನ್ನು ಗುರುತಿಸುವುದು, ಸೂಕ್ತ ಸಲಹೆ, ಮಾರ್ಗದರ್ಶನ ನೀಡುವುದು, ತರಬೇತಿ ಕುರಿತು ಮಾಹಿತಿ, ಖಾಲಿ ಹುದ್ದೆಗಳ ವಿವರಗಳೊಂದಿಗೆ ನೇಮಕಾತಿ ಹೊಂದಿದ ವಿಕಲಚೇತನರ ವಿವರಗಳನ್ನು ದಾಖಲಿಸುವುದು ಈ ಕೋಶದ ಮೂಲಕ ಮಾಡಬಹುದಾಗಿದೆ ಮತ್ತು ಖಾಸಗಿ ವಲಯದ ಕಾರ್ಪೊರೇಟ್ ಸಂಸ್ಥೆಗಳಲ್ಲಿನ ಉದ್ಯೋಗ ಅವಕಾಶದ ವಿವರಗಳು ಮತ್ತು ಅವಶ್ಯಕತೆಗಳನ್ನು ಸಂಗ್ರಹಿಸಿ ವಿಕಲಚೇತನರಿಗೆ ಅಲ್ಲಿ ಉದ್ಯೋಗಾವಕಾಶ ಕಲ್ಪಿಸಬಹುದಾಗಿದೆ ಎಂದು ತಿಳಿಸಿರುತ್ತಾರೆ.

ಅಲ್ಲದೆ ಸದರಿ ಉದ್ಯೋಗ ಕೋಶವನ್ನು ಸ್ವಯಂ ಸೇವಾ ಸಂಸ್ಥೆಯ ಮೂಲಕ ಪ್ರಾರಂಭಿಸುವುದು ಉಚಿತವೆಂದು ಕಂಡುಬರುತ್ತದೆ. ವಿಕಲಚೇತನರ ತರಬೇತಿ ನೇಮಕಾತಿಗಳಲ್ಲಿ ಅನುಭವವಿರುವ ಸ್ವಯಂಸೇವಾ ಸಂಸ್ಥೆಗಳನ್ನು ಅರ್ಜಿ ಆಹ್ವಾನಿಸಿ ಗುರುತಿಸಬಹುದಾಗಿದೆ. ಉದ್ಯೋಗ ಕೋಶಕ್ಕೆ ಅಗತ್ಯವಾದ ಸಿಬ್ಬಂದಿಗಳನ್ನು ಗೌರವಧನದ ಆಧಾರದ ಮೇಲೆ ತೆಗೆದುಕೊಳ್ಳಲು ಅನುಮತಿ ಹಾಗೂ ಅದಕ್ಕಾಗಿ ತಗಲುವ ವೆಚ್ಚವನ್ನು ಭರಿಸಲು ಮಂಜೂರಾತಿ ನೀಡಲು ಕೋರಿರುತ್ತಾರೆ. ಸದರಿ ಕೋಶವು ನಿರ್ದೇಶನಾಲಯದ ಉಸ್ತುವಾರಿಯಲ್ಲಿ ಸ್ವಯಂಸೇವಾ ಸಂಸ್ಥೆಯಿಂದ ನಿರ್ವಹಿಸಲ್ಪಡುತ್ತದೆ ಎಂದು ತಿಳಿಸುತ್ತಾ ಉದ್ಯೋಗ ಕೋಶವನ್ನು ಪ್ರಾರಂಭಿಸಲು ಅಗತ್ಯವಾದ ಹುದ್ದೆಗಳ ಹಾಗೂ ಬೇಕಾಗುವ ಅನುದಾನದ ವಿವರಗಳನ್ನು ಲಗತ್ತಿಸಿ ಕಳುಹಿಸಿರುತ್ತಾರೆ.

ಅಲ್ಲದೆ ಮಾನ್ಯ ಮುಖ್ಯಮಂತ್ರಿಗಳು 2012–13ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಇಲಾಖೆಯ ಯೋಜನಾ ಮಿತಿಯೊಳಗೆ ವಿಕಲಚೇತನರಿಗಾಗಿ ಉದ್ಯೋಗ ಕೋಶವನ್ನು ಪಾರಂಭಿಸಲು ಪ್ರಕಟಿಸಿರುವ ಹಿನ್ನೆಲೆಯಲ್ಲಿ ಈ ಕೋಶದ ಮೂಲಕ ಎಲ್ಲಾ ರೀತಿಯ ವಿಕಲತೆಯುಳ್ಳ ವಿಕಲಚೇತನರಿಗೆ ಒಂದೇ ಸ್ಥಳದಲ್ಲಿ ಉದ್ಯೋಗ, ತರಬೇತಿ, ಸಲಹೆ, ಸೌಲಭ್ಯಗಳನ್ನು ಒದಗಿಸಲು ಕೋಶವನ್ನು ಪ್ರಾರಂಭಿಸುವ ಅವಶ್ಯಕತೆ ಇದೆ. ಸದರಿ ಉದ್ಯೋಗ ಕೋಶವನ್ನು ಬೆಂಗಳೂರಿನಲ್ಲಿ ಪ್ರಾರಂಭಿಸಲು ಉದ್ದೇಶಿಸಲಾಗಿರುತ್ತದೆ. ವಿಕಲಚೇತನ ಅಭ್ಯರ್ಥಿಗಳಿಗೆ ಉದ್ಯೋಗ ಕೋಶದ ಮಾಹಿತಿ ಮತ್ತು ಪರಿಚಯ ನೀಡುವುದರ ಜೊತೆಗೆ ಅವರ ಕೌಶಲ್ಯಗಳನ್ನು ಗುರುತಿಸಿ ಪ್ರಸಕ್ತ ಉದ್ಯೋಗಾವಕಾಶಗಳಿಗೆ ಸರಿಹೊಂದುವಂತಹ ತರಬೇತಿಗಳನ್ನು ಆಯೋಜಿಸಿ ಅವರ ಸಂಸ್ಥೆಗಳಲ್ಲಿ ಉದ್ಯೋಗಾವಕಾಶಗಳ ಬಗ್ಗೆ ಮಾಹಿತಿ ನೀಡುವುದಲ್ಲದೆ ಅಗತ್ಯವಿರುವ ತರಬೇತಿ ನೀಡಿ ಉದ್ಯೋಗಾವಕಾಶ ಒದಗಿಸುವುದಲ್ಲದೆ ಸ್ವಯಂ ಉದ್ಯೋಗ ಕೈಗೊಂಡು ಸ್ವಾವಲಂಭಿಯಾಗುವ ಈ ಕೇಂದ್ರದ ಅವಕಾಶವಿರುತ್ತದೆಯೆಂದು ಸಹ ನಿರ್ದೇಶಕರು ತಮ್ಮ ಪ್ರಸ್ತಾವನೆಯಲ್ಲಿ ತಿಳಿಸಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 14 ಪಿಎಚ್‌ಪಿ 2012, ಬೆಂಗಳೂರು, ದಿನಾಂಕ: 15–06–2012**

ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ವತಿಯಿಂದ ಬೆಂಗಳೂರಿನಲ್ಲಿ ವಿಕಲಚೇತನರಿಗಾಗಿ ಉದ್ಯೋಗ ಕೋಶ ಪ್ರಾರಂಭಿಸಲು ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ. ಸದರಿ ಕೋಶವನ್ನು ಸ್ವಯಂ ಸೇವಾ ಸಂಸ್ಥೆಗಳ ಮುಖಾಂತರ ನಡೆಸಬೇಕಾಗಿದ್ದು, ಸ್ವಯಂ ಸೇವಾ ಸಂಸ್ಥೆಗಳನ್ನು ಆಯ್ಕೆ ಮಾಡಲು ಅನುಸರಿಸಬೇಕಾದ ಮಾರ್ಗಸೂಚಿಗಳು ಹಾಗೂ ಷರತ್ತುಗಳ ವಿವರಗಳನ್ನು ಅನುಬಂಧ–1ರಲ್ಲಿ ನೀಡಲಾಗಿದೆ. ಉದ್ಯೋಗ ಕೋಶದ ನಿರ್ವಹಣೆಗಾಗಿ ತಗಲಬಹುದಾದ ವಾರ್ಷಿಕ ಅಂದಾಜು ವೆಚ್ಚಗಳನ್ನು ಅನುಬಂಧ–2ರಲ್ಲಿ ನೀಡಲಾಗಿದೆ.

ಸದರಿ ಕೋಶಕ್ಕೆ ಸಂಬಂಧಿತ ವೆಚ್ಚಗಳನ್ನು ಲೆಕ್ಕ ಶೀರ್ಷಿಕೆ 2235–02–101–0–55 ಯೋಜನೆ ಉಪಲೆಕ್ಕಶೀರ್ಷಿಕೆ 059 ಇತರೆ ಖರ್ಚುಗಳು ಅಡಿಯಲ್ಲಿ 2012–13ನೇ ಸಾಲಿಗೆ ಲಭ್ಯವಿರುವ ರೂ.86.00 ಲಕ್ಷಗಳ ಆಯವ್ಯಯದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಹಿಂಬರಹ ಸಂಖ್ಯೆ: ಪಿಡಿ 13 ಐಎಂಎಂ 2012, ದಿನಾಂಕ:30–05–2012 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 397 ವೆಚ್ಚ–3/12, ದಿನಾಂಕ:26–05–2012 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕಮಲಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಅನುಬಂಧ–1**

**ಸ್ವಯಂ ಸೇವಾ ಸಂಸ್ಥೆಯನ್ನು ಆಯ್ಕೆ ಮಾಡಲು ಅನುಸರಿಸ ಬೇಕಾದ ಮಾರ್ಗ ಸೂಚಿಗಳು:**

- ಸಂಸ್ಥೆಯು ಕರ್ನಾಟಕ ಸಂಘ ಸಂಸ್ಥೆಗಳ ನೊಂದಣಿ ಕಾಯ್ದೆ 1960ರಡಿ ಅಥವಾ ಸಾರ್ವಜನಿಕ ಟ್ರಸ್ಟ್ ಡೀಡ್ ಅಡಿ ನೊಂದಾಯಿಸಿ ಕನಿಷ್ಠ 3 ವರ್ಷಗಳಾಗಿದ್ದು, ಸಾಮಾಜಿಕವಾಗಿ ಉತ್ತಮ ಹೆಸರು ಗಳಿಸಿರಬೇಕು.
- ಸಂಸ್ಥೆಯು ಸರಿಯಾಗಿ ರಚಿತಗೊಂಡಿರುವ ಕಾರ್ಯಕಾರಿ ಸಮಿತಿಯನ್ನು ಹೊಂದಿದ್ದು ಅದರ ಅಧಿಕಾರ ಜವಾಬ್ದಾರಿ ಮತ್ತು ಕರ್ತವ್ಯವನ್ನು ಸ್ಪಷ್ಟವಾಗಿ ಲಿಖಿತ ರೂಪದಲ್ಲಿ ಸಂವಿಧಾನ ಬದ್ಧವಾಗಿ ವ್ಯಾಖ್ಯಾನಿಸಿರಬೇಕು.
- ಸುಭದ್ರವಾಗಿ ಆರ್ಥಿಕವಾಗಿ ಸಬಲವಾಗಿರುವ ಸ್ವಯಂ ಸೇವಾ ಸಂಸ್ಥೆ ಆಗಿರಬೇಕು.
- ಉದ್ಯೋಗ ಕೋಶವನ್ನು ನಡೆಸಲು ಆಯ್ಕೆಮಾಡುವ ಬೆಂಗಳೂರಿನ ಕಟ್ಟಡವು 4000 ಚ.ಮೀ.ಅಳತೆಯಲ್ಲಿದ್ದು, ಮೂಲಭೂತ ಸೌಕರ್ಯ ಹೊಂದಿದ್ದು, ವಿಕಲಚೇತನರ ಚಲನ ವಲನಕ್ಕೆ ಸಾಕಷ್ಟು ಸ್ಥಳಾವಕಾಶ ಇರಬೇಕು. ವಿಕಲಚೇತನರು ಸುಗಮವಾಗಿ ಚಲಿಸಲು ಅಡೆತಡೆ ರಹಿತ ವಾತಾವರಣದಲ್ಲಿರಬೇಕು, ಯೋಗ್ಯವಾಗಿರಬೇಕು ಹಾಗೂ ಬಂದು ಹೋಗಲು ಅನುಕೂಲವಾಗುವ ಹಾಗೇ ನಗರಕ್ಕೆ ಹತ್ತಿರದಲ್ಲಿರಬೇಕು.
- ಸಂಸ್ಥೆಯು ವಿಕಲಚೇತನರ ಕ್ಷೇತ್ರದಲ್ಲಿ ಕನಿಷ್ಠ 5 ವರ್ಷ ಅನುಭವ ಪಡೆದಿರತಕ್ಕದ್ದು.
- ಬೆಂಗಳೂರು ನಗರವಲ್ಲದೆ ಉಳಿದ ಮೂರು ಕಂದಾಯ ವಿಭಾಗದಲ್ಲಿ ಒಂದು ಕಡೆ ತರಬೇತಿ ನಡೆಸಲು, ಉದ್ಯೋಗ ಮೇಳ ಆಯೋಜಿಸಲು ಸಾಮರ್ಥ್ಯ ಹೊಂದಿರಬೇಕು.
- ಸರ್ಕಾರಿ, ಅರೆ ಸರ್ಕಾರಿ, ಖಾಸಗಿ, ಬಹುರಾಷ್ಟ್ರೀಯ ಕಂಪನಿಗಳೊಂದಿಗೆ ಸತತ ಸಂಪರ್ಕ ಹೊಂದಿದ್ದು ಉದ್ಯೋಗವಕಾಶ ಇರುವ ಬಗ್ಗೆ ಸಂಪೂರ್ಣ ಅರಿತವರಾಗಿರಬೇಕು.
- ಉದ್ಯೋಗ ಕೋಶವು ವಿಕಲಚೇತನರಿಗೆ ಸ್ಫೂರ್ತಿ ನೀಡುವ, ಅವರ ಆತ್ಮ ವಿಶ್ವಾಸ ಹೆಚ್ಚಿಸಿ ಅವರ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಗೆ ಕಾರಣವಾಗುವ ಕೇಂದ್ರವಾಗುವಂತಿರಬೇಕು.
- ಮೇಲ್ಕಾಣಿಸಿದಂತೆ ಸೂಕ್ತ ಸಂಸ್ಥೆಯನ್ನು ಸರ್ಕಾರದ ಕಾರ್ಯದರ್ಶಿಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ರವರ ಅಧ್ಯಕ್ಷತೆಯಲ್ಲಿ ಸರ್ಕಾರದ ಜಂಟಿ ಕಾರ್ಯದರ್ಶಿಗಳು ಹಾಗೂ ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ರವರುಗಳು ಆಯ್ಕೆಮಾಡತಕ್ಕದ್ದು.

**II ಆಯ್ಕೆಗೊಂಡ ಸ್ವಯಂ ಸೇವಾ ಸಂಸ್ಥೆಯ ಕರ್ತವ್ಯಗಳು/ಷರತ್ತುಗಳು:**

- ಬೆಂಗಳೂರು ನಗರದಲ್ಲಿ ಉದ್ಯೋಗ ಕೋಶವನ್ನು ಪ್ರಾರಂಭಿಸಬೇಕು.
- ಉದ್ಯೋಗಾಕಾಂಕ್ಷಿಗಳ ನೋಂದಣಿ ಮಾಡಿಕೊಂಡು ಡಾಟಾಬೇಸ್ ಸಿದ್ಧ ಪಡಸಿಕೊಂಡು ಸಂಬಂಧಿಸಿದ ಪ್ರಮಾಣ ಪತ್ರವನ್ನು ಪಡೆಯಬೇಕು.
- ಉದ್ಯೋಗಾಕಾಂಕ್ಷಿಗಳ ಸಾಮರ್ಥ್ಯ ಪರೀಕ್ಷೆ ಮಾಡಿಕೊಂಡು ಉದ್ಯೋಗ ಅರ್ಹತೆಯನ್ನು ನಿರ್ಧರಿಸಬೇಕು. ಅವರಲ್ಲಿಯ ಕೌಶಲ್ಯ ಸಾಮರ್ಥ್ಯವನ್ನು ಅಥವಾ ಕೌಶಲ್ಯ ಕೊರತೆಗಳನ್ನು ನುರಿತ ಪರಿಣಿತರಿಂದ ಗುರುತಿಸಬೇಕು. ಇದಕ್ಕಾಗಿ ಸುಸಜ್ಜಿತವಾದ ಆನ್‌ಲೈನ್ ಮತ್ತು ಆಫ್‌ಲೈನ್ ಮೌಲ್ಯಾಂಕನ ಕೋಣೆಗಳ ವ್ಯವಸ್ಥೆ ಇರಬೇಕು.
- ಪ್ರತಿಯೊಬ್ಬ ಉದ್ಯೋಗಾಕಾಂಶಿಯನ್ನು ಸಮಾಲೋಚನೆ (ಕೌನ್ಸಿಲಿಂಗ್) ಒಳಪಡಿಸಬೇಕು. ಅವರಲ್ಲಿರುವ ಕಿಳರಿಮೆಯನ್ನು ಹೋಗಲಾಡಿಸಿ ಸಮರ್ಥ ವೃತ್ತಿ ಜೀವನವನ್ನು ರೂಪಿಸಿಕೊಳ್ಳಲು ಸೂಕ್ತ ಸಲಹೆ ಹಾಗೂ ಮಾರ್ಗದರ್ಶನ ನೀಡಬೇಕು. ಒಂದು ವೇಳೆ ಉದ್ಯೋಗ ಕೌಶಲ್ಯದ ಕೊರತೆ ಕಂಡು ಬಂದಲ್ಲಿ ಕೌಶಲ್ಯ ವೃದ್ಧಿಸಲು ಅನುಭವಿ ಸಮಾಲೋಚಕರೊಬ್ಬರಿಂದ ತರಬೇತಿ ವ್ಯವಸ್ಥೆ ಮಾಡಬೇಕು.
- ಪ್ರತಿ ತ್ರೈಮಾಸಿಕದಲ್ಲಿ ಒಂದು ಬಾರಿ ಉದ್ಯೋಗ ಮೇಳ ಆಯೋಜಿಸುವುದು. ಈ ಮೇಳದಲ್ಲಿ ಅರೆಸರ್ಕಾರಿ/ ಖಾಸಗಿ/ ಬಹುರಾಷ್ಟ್ರೀಯ ಕಂಪನಿಗಳನ್ನು ಆಹ್ವಾನಿಸಿ ಸದರಿ ಕಂಪನಿಗಳ ಮೂಲಕ ಉದ್ಯೋಗದಾತರಿಗೆ ಉದ್ಯೋಗ ಒದಗಿಸುವುದು.
- ಸ್ವಯಂ ಉದ್ಯೋಗ ಮಾಡಲಿಚ್ಚಿಸುವ ವಿಕಲಚೇತನರಿಗೆ ಉಚಿತವಾಗಿ ಅಗತ್ಯ ವೃತ್ತಿ ತರಬೇತಿ ಮತ್ತು ದೈನಂದಿನ ಕೌಶಲ್ಯಗಳನ್ನು ಕಲ್ಪಿಸುವುದು. (Vocational Trining and Soft Skills) ಈ ಉದ್ದೇಶಕ್ಕಾಗಿ ಸುಸಜ್ಜಿತ ತರಬೇತಿ ಕೋಣೆಯನ್ನು ಹಾಗೂ ಕಂಪ್ಯೂಟರ್ ಪ್ರಯೋಗಾಲಯವನ್ನು ಸ್ಥಾಪಿಸುವುದು.
- ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಸಜ್ಜುಗೊಳ್ಳಲು ಸುಸಜ್ಜಿತವಾದ ಅಧ್ಯಯನ ಕೋಣೆಯನ್ನು ಸ್ಥಾಪಿಸಿ ಸೂಕ್ತ ಶಿಕ್ಷಣದ ಪುಸ್ತಕಗಳನ್ನು ಅಧ್ಯಯನಾಕಾಂಷಿಗಳಿಗೆ ಒದಗಿಸುವುದು.
- ಬೆಂಗಳೂರಿನಲ್ಲಿ ಮುಖ್ಯ ಕೇಂದ್ರವನ್ನು ಸ್ಥಾಪಿಸಿ ವಿಭಾಗ ಮಟ್ಟದಲ್ಲಿಯೂ ಒಂದು ತರಬೇತಿ ಮತ್ತು ಉದ್ಯೋಗ ಮೇಳ ನಡೆಸುವುದು.
- ತರಬೇತಿ ನೀಡಿದ ಅಭ್ಯರ್ಥಿಗಳಲ್ಲಿ ಶೇ.50% ರಷ್ಟು ಉದ್ಯೋಗಾರ್ಥಿಗಳಿಗೆ ಉದ್ಯೋಗಾವಕಾಶ ಒದಗಿಸಬೇಕು. ಪ್ರತಿವರ್ಷ ಕನಿಷ್ಠ 1000 ಅಭ್ಯರ್ಥಿಗಳಿಗೆ ತರಬೇತಿ ನೀಡಬೇಕು.
- ಅನುದಾನ ಪಡೆಯುವ ಮೊದಲು ಸ್ವಯಂ ಸೇವಾ ಸಂಸ್ಥೆಯು ರೂ. 100.00 ಮೌಲ್ಯದ ಛಾಪಾ ಕಾಗದದಲ್ಲಿ ಸರ್ಕಾರ / ಇಲಾಖೆಯಿಂದ ಪಡೆಯುವ ಅನುದಾನವನ್ನು ನಿಗದಿತ ಉದ್ದೇಶಕ್ಕೆ ಬಳಸಾಗುತ್ತದೆಂದು ತಪ್ಪಿದಲ್ಲಿ ಶೇ. 15 ರಷ್ಟು ಸರಳ ಬಡ್ಡಿಯೊಂದಿಗೆ ಸರ್ಕಾರಕ್ಕೆ / ಇಲಾಖೆಗೆ ಹಿಂತಿರುಗಿಸುವುದಲ್ಲದೆ, ಸರ್ಕಾರದ ಹಣದ ದುರುಪಯೋಗ ಆಧಾರದ ಮೇಲೆ ಕ್ರಿಮಿನಲ್ ಶಿಕ್ಷೆಗೆ ಸಿದ್ಧರಿರುವುದಾಗಿ ಮುಚ್ಚಳಿಕೆ ನೀಡತಕ್ಕದ್ದು.
- ಫಲಾನುಭವಿಗಳಿಂದ ಯಾವುದೇ ರೀತಿಯ ಶುಲ್ಕ ದೇಣಿಗೆ, ವಂತಿಗೆ, ಕೊಡುಗೆ, ದಾನ ಮುಂತಾದವುಗಳನ್ನು ಸ್ವೀಕರಿಸಬಾರದು.
- ಅನುದಾನದ ಬಗ್ಗೆ ಲೆಕ್ಕ ಪತ್ರಗಳನ್ನು ಸುವ್ಯವಸ್ಥಿತವಾಗಿ ನಿರ್ವಹಿಸತಕ್ಕದ್ದು ಕಾಲಕಾಲಕ್ಕೆ ವರದಿಯನ್ನು ಇಲಾಖೆಗೆ ಸಲ್ಲಿಸತಕ್ಕದ್ದು. ಇಲಾಖೆಯ ಅಧಿಕಾರಿಗಳು ಸಂಸ್ಥೆಯ ತನಿಖೆಗೆ ಬಂದಾಗ ಅಥವಾ ಅನಿರೀಕ್ಷಿತ ಬೇಟಿ ನೀಡಿದಾಗ ಲೆಕ್ಕ ಪತ್ರ ದಾಖಲೆಗಳನ್ನು ಪರೀಕ್ಷಿಸಲು ಸಂಸ್ಥೆಯು ಒದಗಿಸತಕ್ಕದ್ದು.
- ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಸುತ್ತೋಲೆಗಳು, ಸೂಚನೆಗಳು ಹಾಗೂ ಆದೇಶಗಳನ್ನು ಪಾಲಿಸಲು ಸಂಸ್ಥೆಯು ಬದ್ಧವಾಗಿರತಕ್ಕದ್ದು.

**ಬಿ. ಕಮಲಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಅನುಬಂಧ–2

### ವಿಕಲಚೇತನರಿಗಾಗಿ ಉದ್ಯೋಗಕೋಶ ಕೇಂದ್ರಕ್ಕೆ ಬೇಕಾದ ವಾರ್ಷಿಕ ಅಂದಾಜು ವೆಚ್ಚದ ಅನುದಾನದ ವಿವರ

| ಕ್ರ. ಸಂ. | ವಿವರ | ವಿದ್ಯಾರ್ಹತೆ/ಗೌರವಧನ | ಒಟ್ಟು ಮೊತ್ತ. ರೂ.ಗಳಲ್ಲಿ |
|---|---|---|---|
| I | **ಸಿಬ್ಬಂದಿ ವೆಚ್ಚಗಳು (ಗೌರವಧನ ಆಧಾರಿತ)** | | |
| | • ಉದ್ಯೋಗಾಧಿಕಾರಿ | ಸ್ನಾತಕೋತ್ತರ ಪದವಿ ಜೊತೆಗೆ ಉದ್ಯೋಗ ತರಬೇತಿಯಲ್ಲಿ ಡಿಪ್ಲೋಮಾ<br>ರೂ.30,000/– x 12 ತಿಂಗಳು x 1 ಸಂಖ್ಯೆ | **3,60,000/–** |
| | • ಸಮಾಜ ಕಾರ್ಯಕರ್ತರು | ಎಂ. ಎಸ್. ಡಬ್ಲ್ಯೂ.<br>20,000/– x 12 ತಿಂಗಳು x 2 ಸಂಖ್ಯೆ | **4,80,000/–** |
| | • ವೃತ್ತಿ ಸಲಹೆಗಾರರು | ಪದವಿ ಜೊತೆಗೆ ವೃತ್ತಿ ತರಬೇತಿಯಲ್ಲಿ ಡಿಪ್ಲೋಮಾ<br>ರೂ.15,000/– x 12 ತಿಂಗಳು x 4 ಸಂಖ್ಯೆ | **7,20,000/–** |
| | • ಅಕೌಂಟೆಂಟ್ | ಬಿ.ಕಾಂ. ಪದವಿ ಜೊತೆಗೆ ಕಂಪ್ಯೂಟರ್ ಜ್ಞಾನ<br>ರೂ.12,000/– x 12 x 1 ಸಂಖ್ಯೆ | **1,44,000/–** |
| | • ಕಂಪ್ಯೂಟರ್ ಆಪರೇಟರ್ | ಪಿ.ಯು.ಸಿ ಜೊತೆಗೆ ಕಂಪ್ಯೂಟರ್ ತರಬೇತಿ<br>ರೂ.8,000/– x 12 ತಿಂಗಳು x 10 ಸಂಖ್ಯೆ | **9,60,000/–** |
| | • ಸೇವಕರು | ರೂ.5000/– x 12 ತಿಂಗಳು x 2 ಸಂಖ್ಯೆ | **1,20,000/–** |
| | **ಒಟ್ಟು ರೂ.** | | **27,84,000/–** |
| II | **ಮಾಸಿಕ ಕಛೇರಿ ವೆಚ್ಚಗಳು** | | |
| | • ದೂರವಾಣಿ ವೆಚ್ಚ | ರೂ 6000/– x 12 ತಿಂಗಳು | **72,000/–** |
| | • ಸಾಮಾನ್ಯ ವೆಚ್ಚ = | ರೂ. 15,000/– x 12 ತಿಂಗಳು | **1,80,000/–** |
| | • ಕಟ್ಟಡ ವೆಚ್ಚ. | ರೂ 40,000/– x 12 ತಿಂಗಳು | **4,80,000/–** |
| | • ಇಂಧನ ವೆಚ್ಚ / ಪ್ರಯಾಣ ವೆಚ್ಚ | ರೂ. 9000 x 12 ತಿಂಗಳು | **1,08,000/–** |
| | ಒಟ್ಟು ರೂ. | | **8,40,000/–** |
| III | **ತರಬೇತಿ ವೆಚ್ಚ** | | |
| | ಪ್ರತಿ ಅಭ್ಯರ್ಥಿಗೆ ಸರಾಸರಿ 100 ಗಂಟೆಗಳ ತರಬೇತಿ ನೀಡಲು ತಗಲುವ ವೆಚ್ಚ | ಪ್ರತಿ ಗಂಟೆಗೆ ರೂ.15,000/–ದಂತೆ 2000 ಅಭ್ಯರ್ಥಿಗಳಿಗೆ | **30,00,000/–** |
| IV | **ಉದ್ಯೋಗ ಮೇಳದ ವೆಚ್ಚ** | | |
| | ಪ್ರತಿ ತ್ರೈಮಾಸಿಕ ಉದ್ಯೋಗ ಮೇಳಕ್ಕೆ | ರೂ.1,00,000/–ರಂತೆ 4 ಉದ್ಯೋಗ ಮೇಳಗಳಿಗೆ | **4,00,000/–** |
| V | **ಅನಾವರ್ತಕ ವೆಚ್ಚ** | | |
| | **ಯಂತ್ರೋಪಕರಣ ಖರೀದಿಗಾಗಿ** | | |
| | • ಗಣಕ ಯಂತ್ರಗಳು | ರೂ.47,000 x 15 | **7,05,000/–** |
| | • ಜ಼ರಾಕ್ಸ್ ಯಂತ್ರ | ರೂ.99,000 x 01 | **99,000/–** |
| | • ಪ್ರಿಂಟರ್ | ರೂ.30,000 x 01 | **30,000/–** |

| ಕ್ರ. ಸಂ. | ವಿವರ | ವಿದ್ಯಾರ್ಹತೆ/ಗೌರವಧನ | ಒಟ್ಟು ಮೊತ್ತ. ರೂ.ಗಳಲ್ಲಿ |
|---|---|---|---|
| | • ಇ.ಪಿ.ಬಿ.ಬಾಕ್ಸ್, ಎನಲಾಗ್ ಫೋನ್ | ರೂ.25,000 x 01 | **25,000/–** |
| | • ಯು.ಪಿ.ಎಸ್. | ರೂ. 1,66,000 x 01 | **1,66,000/–** |
| | • ಫೈರ್‌ವಾಲ್ ಸಂಖ್ಯೆಗಳು | ರೂ. 98,000 x 01 | **98,000/–** |
| | • ಎಲ್.ಸಿ.ಡಿ.ಪ್ರೊಜೆಕ್ಟರ್ | ರೂ.40,000 x 01 | **40,000/–** |
| | • ಇತರೆ ಉಪಕರಣಗಳ ಖರೀದಿಗೆ | ರೂ.**37.000/–** | **37,000/–** |
| | ಒಟ್ಟು ರೂ. | | **12,00,000/–** |
| | | **ಒಟ್ಟು ರೂ.** | **82,24,000/–** |

**ಘೋಷ್ವಾರೆ**

| | | | |
|---|---|---|---|
| 1. | ಸಿಬ್ಬಂದಿ ವೆಚ್ಚಗಳು (ಗೌರವಧನ ಆಧಾರಿತ) | – | ರೂ.27,84,000/– |
| 2. | ಮಾಸಿಕ ಕಛೇರಿ ವೆಚ್ಚಗಳು | – | ರೂ. 8,40,000/– |
| 3. | ತರಬೇತಿ ವೆಚ್ಚ | – | ರೂ.30,00,000/– |
| 4. | ಉದ್ಯೋಗ ಮೇಳದ ವೆಚ್ಚ | – | ರೂ. 4,00,000/– |
| 5. | ಅನಾವರ್ತಕ ವೆಚ್ಚ | – | ರೂ.12,00,000/– |
| | **ಒಟ್ಟು** | – | **ರೂ.82,24,000/–** |

**(ರೂ.ಎಂಭತ್ತೆರಡು ಲಕ್ಷದ ಇಪ್ಪತ್ತನಾಲ್ಕು ಸಾವಿರಗಳು ಮಾತ್ರ)**

**ಬಿ. ಕಮಲಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಪಿ.ಆರ್. 1970**

## ಲೋಕೋಪಯೋಗಿ, ಬಂದರುಗಳು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಶಿವಮೊಗ್ಗ–ಹೊನ್ನಾಳಿ ರಾಜ್ಯ ಹೆದ್ದಾರಿ–25ರ ಶಿವಮೊಗ್ಗ ನಗರ ವ್ಯಾಪ್ತಿಯಲ್ಲಿನ ಕಿ.ಮೀ. 188.00 ರಿಂದ ಕಿಮೀ 191.30 ರವರೆಗಿನ ರಸ್ತೆಯನ್ನು ರೂ. 600.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ನಾಲ್ಕು ಪಥ ರಸ್ತೆಯಾಗಿ ಅಗಲೀಕರಣ ಮಾಡುವ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ), ಬೆಂಗಳೂರು, ಇವರ ಪತ್ರ ಸಂಖ್ಯೆ:ಮುಇಂ/ಸಂಕದ/ರಶಾ/ಸಇ3/ 2011–12 ದಿನಾಂಕ:12.03.2012.

**ಪ್ರಸ್ತಾವನೆ:**

ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ), ಬೆಂಗಳೂರು ರವರ ದಿನಾಂಕ: 12.03.2012ರ ಪತ್ರದಲ್ಲಿ ಶಿವಮೊಗ್ಗ–ಹೊನ್ನಾಳಿ ರಾಜ್ಯ ಹೆದ್ದಾರಿ–25ರ ಶಿವಮೊಗ್ಗ ನಗರ ವ್ಯಾಪ್ತಿಯಲ್ಲಿನ ಕಿ.ಮೀ. 188.00 ರಿಂದ ಕಿಮೀ 191.30 ರವರೆಗಿನ ರಸ್ತೆಯನ್ನು ರೂ. 600.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ನಾಲ್ಕು ಪಥ ರಸ್ತೆಯಾಗಿ ಅಗಲೀಕರಣ ಮಾಡುವ ಕಾಮಗಾರಿಯು, ಲೆಕ್ಕ ಶೀರ್ಷಿಕೆ:5054–ಇತರೆ ರಸ್ತೆ ನಿರ್ಮಾಣ ಅಡಿಯಲ್ಲಿ, 2011–12ನೇ ಸಾಲಿನ ಅನುಮೋದಿತ ಅಪೆಂಡಿಕ್ಸ್–ಇ ನಲ್ಲಿ, ಅಂದಾಜು ವೆಚ್ಚ ರೂ. 600.00 ಲಕ್ಷಗಳ ಹಾಗೂ 2011–12ನೇ ವರ್ಷದಲ್ಲಿ ರೂ. 180.00 ಲಕ್ಷಗಳ ಅನುದಾನದೊಂದಿಗೆ ಸೇರ್ಪಡೆಯಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಈ ಪ್ರಸ್ತಾವನೆಗೆ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ದಕ್ಷಿಣ), ಬೆಂಗಳೂರು ರವರು ಸರ್ಕಾರದ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಯ ಸಮಾಲೋಚನೆಯೊಂದಿಗೆ ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ: ಲೋಇ 157 ಸಿಆರ್‌ಎಂ 2012 ದಿನಾಂಕ: 19.06.2012.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ ಶಿವಮೊಗ್ಗ–ಹೊನ್ನಾಳಿ ರಾಜ್ಯ ಹೆದ್ದಾರಿ–25ರ ಶಿವಮೊಗ್ಗ ನಗರ ವ್ಯಾಪ್ತಿಯಲ್ಲಿನ ಕಿ.ಮೀ. 188.00 ರಿಂದ ಕಿಮೀ 191.30 ರವರೆಗಿನ ರಸ್ತೆಯನ್ನು ರೂ. 600.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ನಾಲ್ಕು ಪಥ ರಸ್ತೆಯಾಗಿ ಅಗಲೀಕರಣ ಮಾಡುವ ಕಾಮಗಾರಿಗೆ 2012–13ನೇ ಸಾಲಿನ ಅಪೆಂಡಿಕ್ಸ್–ಇ ಅಡಿಯಲ್ಲಿ ಈ ಕಾಮಗಾರಿಗೆ ರೂ. 200.00 ಲಕ್ಷಗಳ ಅನುದಾನ ಹಂಚಿಕೆಯೊಂದಿಗೆ ಸೇರಿಸುವ ಷರತ್ತಿನೊಂದಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: PWD 250 FC-1/12 ದಿನಾಂಕ: 19.04.2012 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಆರ್. ರೇವಣ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರುಗಳು ಹಾಗೂ
ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

**ಪಿ.ಆರ್. 2001**

.

## ಲೋಕೋಪಯೋಗಿ, ಬಂದರುಗಳು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಹುಬ್ಬಳ್ಳಿ–ಗೋಕುಲ–ಕಣವಿ ಹೊನ್ನಾಪುರ ಜಿಲ್ಲಾ ಮುಖ್ಯ ರಸ್ತೆಯ ಹುಬ್ಬಳ್ಳಿ ವಿಮಾನ ನಿಲ್ದಾಣದಿಂದ (ಕಿಮೀ 0.00) ಹುಬ್ಬಳ್ಳಿ ಧಾರವಾಡ ಬೈಪಾಸ್ ರವರೆಗಿನ (4.20 ಕಿಮೀ) ರಸ್ತೆ ಅಭಿವೃದ್ಧಿ ಕಾಮಗಾರಿಗೆ ಹೆಚ್ಚುವರಿಯಾಗಿ ರೂ. 3.98 ಕೋಟಿ ಅನುದಾನ ಒದಗಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಲೋಇ 35 ಸಿಆರ್‌ಎಂ 2010 ದಿನಾಂಕ:6.4.2010.
2. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ಉತ್ತರ), ಧಾರವಾಡ, ಇವರ ಪತ್ರ ಸಂಖ್ಯೆ: (i)ಮುಇಂ(ಉ)/ತಾಂಸ–1/ಸಇಂ–2/ಅಸೈಡ್/2011–12/01387 ದಿನಾಂಕ:8.05.2011, (ii) ಮುಇಂ(ಉ)/ತಾಂಸ–1/ಸಇಂ–2/ಅಸೈಡ್/2011–12/ 08232 ದಿನಾಂಕ:19.11.2011 ಮತ್ತು (iii) CE (N)/TA–1/AE–2/ASIDE/2012–13/01065 ದಿನಾಂಕ:09.05.2012.
3. ವ್ಯವಸ್ಥಾಪಕ ನಿರ್ದೇಶಕರು, ವಿಶ್ವೇಶ್ವರಯ್ಯ ಇಂಡಸ್ಟ್ರಿಯಲ್ ಟ್ರೇಡ್ ಸೆಂಟರ್, ಬೆಂಗಳೂರು, ಇವರ ಪತ್ರ ಸಂಖ್ಯೆ:VITC/ASIDE/2011–12/472 ದಿನಾಂಕ:15.10.2011.

**ಪ್ರಸ್ತಾವನೆ:–**

ಮೇಲೆ ಕ್ರಮಾಂಕ(1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 06.04.2010 ರಲ್ಲಿ ಪತ್ರಗಳಲ್ಲಿ ಧಾರವಾಡ ಜಿಲ್ಲೆ ಹುಬ್ಬಳ್ಳಿ ತಾಲ್ಲೂಕಿನ ಹುಬ್ಬಳ್ಳಿ–ಗೋಕುಲ–ಕಣವಿ ಹೊನ್ನಾಪುರ ಜಿಲ್ಲಾ ಮುಖ್ಯ ರಸ್ತೆಯ, ಹುಬ್ಬಳ್ಳಿ ವಿಮಾನ ನಿಲ್ದಾಣದಿಂದ (ಕಿಮೀ 0.00) ಹುಬ್ಬಳ್ಳಿ ಧಾರವಾಡ ಬೈಪಾಸ್ ರವರೆಗಿನ (4.20 ಕಿಮೀ) ರಸ್ತೆ ನಿರ್ಮಾಣ ಕಾಮಗಾರಿಯನ್ನು ರೂ. 2000.00 ಲಕ್ಷಗಳ ಅಂದಾಜು ಮೊತ್ತಕ್ಕೆ, ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಈ ಕಾಮಗಾರಿಯ ಶೇಕಡ 50 ರಷ್ಟು ಅಂದಾಜು ಮೊತ್ತವನ್ನು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ASIDE ಯೋಜನೆಯ ಮೂಲದಿಂದ ಮತ್ತು ಉಳಿದ ಶೇಕಡ 50 ರಷ್ಟು ಲೋಕೋಪಯೋಗಿ ಇಲಾಖೆಯ ಲೆಕ್ಕ ಶೀರ್ಷಿಕೆ 5054–ಒಆರ್‌ಎಫ್ (ಯೋಜನೆ) ಅಡಿಯ ಅನುದಾನದಿಂದ ಭರಿಸಲಾಗುತ್ತಿದೆ.

ಮೇಲೆ ಕ್ರಮಾಂಕ(2) ರಲ್ಲಿ ಓದಲಾದ ಪತ್ರಗಳಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರು, ಈ ಕಾಮಗಾರಿಗೆ ವೆಚ್ಚವನ್ನು ಮೂಲತಃ ಮಂಜೂರಾದ ರೂ. 20.00 ಕೋಟಿಗಳ ಬದಲು ಈ ಕೆಳಕಂಡ ಕಾರಣಗಳಿಂದಾಗಿ ರೂ. 27.95 ಕೋಟಿಗಳಿಗೆ ಪರಿಷ್ಕೃತವಾದ್ದರಿಂದ ಹೆಚ್ಚುವರಿ ರೂ. 7.95 ಕೋಟಿ ಅನುದಾನ ಕೋರಿರುತ್ತಾರೆ;

ಅ) ಯೋಜನಾ ವರದಿಯನ್ನು ಸಿದ್ದಪಡಿಸುವಾಗ ಜಮೀನು ಒಂದೇ ಸಮತಟ್ಟಾಗಿದ್ದಿತು. ಈ ಮದ್ಯೆ, ಗ್ರಾಮಸ್ಥರು, ಇಟ್ಟಿಗೆ ನಿರ್ಮಾಣಕ್ಕಾಗಿ, ಮಣ್ಣು ತೆಗೆಯಲು ಪ್ರಾರಂಭಿಸಿದ್ದರು. ಫಲಿತಾಂಶವಾಗಿ, ರಸ್ತೆ ಅಲೈನ್‌ಮೆಂಟ್‌ನ ಉದ್ದಕ್ಕೂ, ಹಳ್ಳವೇರ್ಪಟ್ಟಿದ್ದು, ಮಣ್ಣಿನ ಏರಿ ನಿರ್ಮಿಸುವ ಅವಶ್ಯಕತೆ ಉಂಟಾಗಿರುತ್ತದೆ. ಈ ಅಂಶವು ಮೂಲ ಅಂದಾಜಿನಲ್ಲಿ ಇರಲಿಲ್ಲ.

ಆ) ಮಣ್ಣಿನ ಏರಿ ನಿರ್ಮಿಸಲು, ಹೆಚ್ಚುವರಿ ಭೂಸ್ವಾಧೀನ ತಡೆಯುವ ಉದ್ದೇಶದಿಂದ, ಈಗ ಆರ್‌ಸಿಸಿ ರಕ್ಷಣಾ ಗೋಡೆ ನಿರ್ಮಾಣಕ್ಕೆ ಡಿಸೈನ್ ಮಾಡಲಾಗಿದೆ. ಇದು ಯೋಜನಾ ವೆಚ್ಚಕ್ಕೆ ಸೇರ್ಪಡೆಯಾಗಿದೆ.

ಮೇಲೆ ಕ್ರಮಾಂಕ(3)ರಲ್ಲಿ ಓದಲಾದ ದಿನಾಂಕ:15.10.2011ರಲ್ಲಿ ವ್ಯವಸ್ಥಾಪಕ ನಿರ್ದೇಶಕರು, ವಿಶ್ವೇಶ್ವರಾಯ ಇಂಡಸ್ಟ್ರೀಯಲ್ ಟ್ರೇಡ್ ಸೆಂಟರ್, (VITC) ಬೆಂಗಳೂರು, ರವರು ದಿನಾಂಕ 3–9–2011 ರಂದು ನಡೆದ 14ನೇ ರಾಜ್ಯ ಮಟ್ಟದ ಎಕ್ಸ್‌ಪೋರ್ಟ್ ಪ್ರಮೋಷನ್ ಕಮಿಟಿಯು, ರಸ್ತೆ ನಿರ್ಮಾಣದ ಪರಿಷ್ಕೃತ ಅಂದಾಜು ರೂ. 27.95 ಕೋಟಿಗೆ, ಅಸ್ಸೈಡ್ ಯೋಜನೆಯ ಅಡಿ ಈ ಕೆಳಕಂಡ pattern ನಂತೆ ಅನುಮೋದಿಸಿರುವುದಾಗಿ ತಿಳಿಸಿರುತ್ತಾರೆ:

| | | |
|---|---|---|
| ಯೋಜನೆಯ ಪರಿಷ್ಕೃತ ವೆಚ್ಚ | : | ರೂ. 27.95 ಕೋಟಿ |
| ಅಸ್ಸೈಡ್ ಅನುದಾನ | : | ರೂ. 10.00 ಕೋಟಿ |
| ಹೆಚ್ಚುವರಿ ಅಸ್ಸೈಡ್ ಅನುದಾನ | : | ರೂ. 3.97 ಕೋಟಿ |
| ಪಿಡಬ್ಲ್ಯುಡಿ ಬಂಡವಾಳ | : | ರೂ. 13.98 ಕೋಟಿ |

ಮುಖ್ಯ ಇಂಜಿನಿಯರ್ ರವರ ಪ್ರಸ್ತಾವನೆಯನ್ನು ಸದರಿ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಯ ಸಮಾಲೋಚನೆಯೊಂದಿಗೆ ಪರಿಶೀಲಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ: ಲೋಇ 35 ಸಿಆರ್‌ಎಂ 2010, ಬೆಂಗಳೂರು, ದಿನಾಂಕ 18ನೇ ಜೂನ್ 2012.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಧಾರವಾಡ ಜಿಲ್ಲೆ, ಹುಬ್ಬಳ್ಳಿ ತಾಲ್ಲೂಕಿನ, ಹುಬ್ಬಳ್ಳಿ–ಗೋಕುಲ–ಕಣವಿ ಹೊನ್ನಾಪುರ ಜಿಲ್ಲಾ ಮುಖ್ಯ ರಸ್ತೆಯ, ಹುಬ್ಬಳ್ಳಿ ವಿಮಾನ ನಿಲ್ದಾಣದಿಂದ (ಕಿಮೀ 0.00) ಹುಬ್ಬಳ್ಳಿ–ಧಾರವಾಡ ಬೈಪಾಸ್ ರವರೆಗಿನ (4.20 ಕಿಮೀ) ರಸ್ತೆ ನಿರ್ಮಾಣ ಕಾಮಗಾರಿಯ ರೂ. 27.95 ಕೋಟಿಗಳ (ಇಪ್ಪತ್ತೇಳು ಕೋಟಿ ತೊಂಭತ್ತೈದು ಲಕ್ಷ ರೂಪಾಯಿಗಳು ಮಾತ್ರ) ಪರಿಷ್ಕೃತ ಅಂದಾಜಿಗೆ ಈ ಕೆಳಕಂಡ Pattern ನಂತೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

| | | |
|---|---|---|
| ಯೋಜನೆಯ ಪರಿಷ್ಕೃತ ವೆಚ್ಚ | : | ರೂ. 27.95 ಕೋಟಿ |
| ಅಸ್ಸೈಡ್ ಅನುದಾನ | : | ರೂ. 10.00 ಕೋಟಿ |
| ಹೆಚ್ಚುವರಿ ಅಸ್ಸೈಡ್ ಅನುದಾನ | : | ರೂ. 3.97 ಕೋಟಿ |
| ಲೋಕೋಪಯೋಗಿ ಇಲಾಖೆ ಬಂಡವಾಳ | : | ರೂ. 13.98 ಕೋಟಿ |

2. ಈ ಕಾಮಗಾರಿಗೆ ಲೋಕೋಪಯೋಗಿ ಇಲಾಖೆಯ ಭಾಗವಾದ ರೂ.3.98 ಕೋಟಿ ರೂ.ಗಳನ್ನು (ಮೂರು ಕೋಟಿ ತೊಂಭತ್ತೆಂಟು ಲಕ್ಷ ರೂಪಾಯಿಗಳು ಮಾತ್ರ) 2012–13ನೇ ಸಾಲಿನ ಅನುದಾನದಲ್ಲಿ ಲೆಕ್ಕಶೀರ್ಷಿಕೆ:5054–ಜಿಲ್ಲಾ ಮುಖ್ಯ ರಸ್ತೆ ಮತ್ತು ಇತರ ರಸ್ತೆ ಅಡಿಯಲ್ಲಿ ಒದಗಿಸಲು ಮಂಜೂರಾತಿ ನೀಡಿದೆ.

3. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: PWD 286 FC–1/12 ದಿನಾಂಕ: 09.05.2012 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಆರ್. ರೇವಣ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರುಗಳು ಹಾಗೂ
ಒಳನಾಡು ಜಲಸಾರಿಗೆ ಇಲಾಖೆ(ಸಂಪರ್ಕ)

**ಪಿ.ಆರ್. 2002**

## ಲೋಕೋಪಯೋಗಿ, ಬಂದರುಗಳು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** 2011–12 ನೇ ಸಾಲಿನ ಅಪೆಂಡಿಕ್ಸ್–ಇ ನಲ್ಲಿ 5054: ವಿವಿಧ ಲೆಕ್ಕ ಶೀರ್ಷಿಕೆಯಡಿ ಸೇರ್ಪಡೆಗೊಂಡು ಅನುಮೋದನೆಗೊಂಡಿರುವ ತಲಾ ರೂ.5.00 ಕೋಟಿ ಮೊತ್ತ ಮೀರಿರುವ ವಿವಿಧ ಮೂರು ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ಪ್ರಸ್ತಾವನೆ ಕುರಿತು.

**ಪ್ರಸ್ತಾವನೆ:**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ರವರು 2011–12ನೇ ಸಾಲಿನ ಅಪೆಂಡಿಕ್ಸ್–ಇ ನ ಭಾಗವಾದ ಈ ಕೆಳಕಂಡ ಕಾಮಗಾರಿಗಳಿಗೆ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ.ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | 2011–12ನೇ ಸಾಲಿನ ಅಪೆಂಡಿಕ್ಸ್–ಇ ನಲ್ಲಿ ಒದಗಿಸಲಾದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|---|
| 1 | ಉಡುಪಿ ಜಿಲ್ಲೆ, ಉಡುಪಿ ತಾಲೂಕಿನ ಮಲ್ಪೆ– ಮೊಳಕಾಲ್ಮೂರು ರಾಜ್ಯ ಹೆದ್ದಾರಿ–65ರ ಆದಿಉಡುಪಿಯಿಂದ ಕಡಿಯಾಲಿ ರಸ್ತೆ (3.60 ಕಿ.ಮೀ. ಯಿಂದ 5.91 ಕಿಮೀ ರವರೆಗೆ) hard shoulder, duck and drain ನಿರ್ಮಾಣ | 600.00 | 180.00 |

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ರವರು, ಇ–ಪ್ರೊಕ್ಯೂರ್‌ಮೆಂಟ್ ಮೂಲಕ 2011–12ನೇ ಸಾಲಿನ ಅಪೆಂಡಿಕ್ಸ್–ಇ ನ ಭಾಗವಾದ ಈ ಕೆಳಕಂಡ ಎರಡು ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ.ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | 2011–12ನೇ ಸಾಲಿನ ಅಪೆಂಡಿಕ್ಸ್–ಇ ನಲ್ಲಿ ಒದಗಿಸಲಾದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|---|
| 1 | ಧಾರವಾಡ ಜಿಲ್ಲೆ, ಕುಂದಗೋಳ ತಾಲೂಕಿನ ಕುಂದಗೋಳ–ರಾಮನಕೊಪ್ಪ ಜಿಲ್ಲಾ ಮುಖ್ಯ ರಸ್ತೆ 0.00 ಕಿ.ಮೀ. ಯಿಂದ 17.00 ಕಿಮೀ ರವರೆಗೆ ಅಭಿವೃದ್ಧಿ. | 900.00 | 270.00 |
| 2 | ಗುಲ್ಬರ್ಗಾ ಜಿಲ್ಲೆ, ಅಫಜಲಪುರ ತಾಲೂಕಿನ ಪಠಾಣ ಕ್ರಾಸ್ ನಿಂದ ದೇವಳಘಾಣಪುರ (7.10 ಕಿಮೀ ಯಿಂದ 12.30 ಕಿಮೀ, 13.10 ಕಿಮೀ ಯಿಂದ 14.30 ಕಿಮೀ, 14.60 ಕಿಮೀ ಯಿಂದ 18.65 ಕಿಮೀ) ಜಿಲ್ಲಾ ಮುಖ್ಯ ರಸ್ತೆ ಅಭಿವೃದ್ಧಿ. | 725.00 | 217.50 |

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ: ಲೋಇ 169 ಸಿಆರ್‌ಎಂ 2012 ದಿನಾಂಕ: 19.06.2012.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ :

1) ಉಡುಪಿ ಜಿಲ್ಲೆ, ಉಡುಪಿ ತಾಲೂಕಿನ ಮಲ್ಪೆ– ಮೊಳಕಾಲ್ಮೂರು ರಾಜ್ಯ ಹೆದ್ದಾರಿ–65ರ ಆದಿಉಡುಪಿಯಿಂದ ಕಡಿಯಾಲಿ ರಸ್ತೆ (3.60 ಕಿ.ಮೀ. ಯಿಂದ 5.91 ಕಿಮೀ ರವರೆಗೆ) hard shoulder, duck and drain ನಿರ್ಮಾಣ ಕಾಮಗಾರಿ, ಅಂದಾಜು ಮೊತ್ತ ರೂ.600.00 ಲಕ್ಷಗಳು.

2) ಧಾರವಾಡ ಜಿಲ್ಲೆ, ಕುಂದಗೋಳ ತಾಲೂಕಿನ ಕುಂದಗೋಳ– ರಾಮನಕೊಪ್ಪ ಜಿಲ್ಲಾ ಮುಖ್ಯ ರಸ್ತೆ 0.00 ಕಿ.ಮೀ. ಯಿಂದ 17.00 ಕಿಮೀ ರವರೆಗೆ ಅಭಿವೃದ್ಧಿ ಮಾಡುವ ಕಾಮಗಾರಿ, ಅಂದಾಜು ಮೊತ್ತ ರೂ.900.00 ಲಕ್ಷಗಳು.

3) ಗುಲ್ಬರ್ಗಾ ಜಿಲ್ಲೆ, ಅಫಜಲಪುರ ತಾಲೂಕಿನ ಪಠಾಣ ಕ್ರಾಸ್ ನಿಂದ ದೇವಳಘಾಣಪುರ (7.10 ಕಿಮೀ ಯಿಂದ 12.30 ಕಿಮೀ, 13.10 ಕಿಮೀ ಯಿಂದ 14.30 ಕಿಮೀ, 14.60 ಕಿಮೀ ಯಿಂದ 18.65 ಕಿಮೀ) ಜಿಲ್ಲಾ ಮುಖ್ಯ ರಸ್ತೆ ಅಭಿವೃದ್ಧಿ ಕಾಮಗಾರಿ, ಅಂದಾಜು ಮೊತ್ತ ರೂ.725.00 ಲಕ್ಷಗಳು.

ಈ ಮೂರು ಕಾಮಗಾರಿಗಳನ್ನು 2012–13ನೇ ವರ್ಷದ ಅಪೆಂಡಿಕ್ಸ್–ಇ ನಲ್ಲಿ ಸೇರಿಸುವುದರೊಂದಿಗೆ, ಅಂದಾಜು ವೆಚ್ಚದ ಶೇಕಡ 33ಕ್ಕೆ ಸಮನಾದ ಅಂದರೆ ಅನುಕ್ರಮವಾಗಿ ರೂ. 200.00 ಲಕ್ಷಗಳು, ರೂ. 300.00 ಲಕ್ಷಗಳು ಮತ್ತು ರೂ. 241.67 ಲಕ್ಷಗಳ ಅನುದಾನದೊಂದಿಗೆ ಸೇರ್ಪಡೆಗೊಳಿಸುವ ಷರತ್ತಿಗೊಳಪಟ್ಟು ಮೇಲೆ ವಿವರಿಸಿದ ಮೂರು ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ 290 ಆಕೋ–1/2012 ದಿನಾಂಕ: 25.04.2012 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಆರ್.ರೇವಣ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರುಗಳು ಹಾಗೂ ಒಳನಾಡು ಜಲಸಾರಿಗೆ ಇಲಾಖೆ(ಸಂಪರ್ಕ–1).

**ಪಿ.ಆರ್. 2003**